ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

12



ಉಭಯ ಭಾಷಾ ವಿದುಷಿ.

ಶ್ರೀಮತಿ॥ ನಲ್ಕುಂದಿ ಶ್ರೀ ರಂಗಮ್ಮ

ವಿರಚಿತಮಪ್ಪ

# ಶ್ರೀ ಭೂವೈಕುಂಠಕಾವ್ಯಂ

ಅಥವಾ

# ಶ್ರೀ ಯದ್ವದ್ರೀಶಚರಿತಕಾವ್ಯಂ



ಮುದ್ರಕರು:

ಶ್ರೀಃ B.V. ಅಳಹಿಯಮಣವಾಳ್.

ಪ್ರೊಪ್ರೈಟರ್,

ಶ್ರೀವಿಜಯಲಕ್ಷ್ಮೀ ಪ್ರೆಸ್,

355. ಡಿ. ಸುಬ್ಬಯ್ಯ ರಸ್ತೆ, ಮೈಸೂರು.

1969.

ಶಕ ೧೮೯೧] [ಬೆಲೆ: ರೂ. ೧-೦೦

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ



ಉಭಯ ಭಾಷಾ ವಿದುಷಿ.

ಶ್ರೀಮತಿ|| ಸಲ್ಕುಂದಿ ಶ್ರೀರಂಗಮ್ಮ

ವಿರಚಿತಮಪ್ಪ

# ಶ್ರೀ ಭೂವೈಕುಂಠಕಾವ್ಯಂ

ಅಥವಾ

# ಶ್ರೀ ಯದ್ವಾದ್ರೀಶ ಚರಿತ ಕಾವ್ಯಂ



ಸಂಪ್ರಕರು :

ಶ್ರೀಃ B.V. ಅಳಹಿಯಮಣವಾಳ್.

ಪ್ರೊಪ್ರೈಟರ್,

ಶ್ರೀವಿಜಯಲಕ್ಷ್ಮೀ ಪ್ರೆಸ್,

೩೬೬. ಡಿ. ಸುಬ್ಬಯ್ಯ ರಸ್ತೆ, ಮೈಸೂರು.

1969

ಶಕ. ೧೮೯೧]　　[ಬೆಲೆ: ರೂ. ೧-೦೦

ಶ್ರೀಃ

ಶ್ರೀ ಮತೇ ರಾಮಾನುಜಾಯ ನಮಃ



ಉಭಯ ಭಾಷಾ ವಿದುಷಿ.

ಶ್ರೀ ಮತಿ॥ ನಲ್ಲಾಂದಿ ಶ್ರೀ ರಂಗಮ್ಮ

ವಿರಚಿತಮಪ್ಪ

# ಶ್ರೀ ಭೂವೈಕುಂಠಕಾವ್ಯಂ

ಅಥವಾ

# ಶ್ರೀ ಯದ್ವದ್ರೀಶ ಚರಿತ ಕಾವ್ಯಂ



ಸಂಪ್ರಕರು:

ಶ್ರೀಃ B.V. ಅಳಹಿಯಮಣವಾಳ್.

ಪ್ರೊಪ್ರೈಟರ್,

ಶ್ರೀವಿಜಯಲಕ್ಷ್ಮೀ ಪ್ರೆಸ್,

೩೬೬. ಡಿ. ಸುಬ್ಬಯ್ಯ ರಸ್ತೆ, ಮೈಸೂರು.

1969

ಶಕ. ೧೮೯೧] [ಬೆಲೆ: ರೂ. ೧-೦೦

ಶ್ರೀಃ

ಶ್ರೀ ಮ ತೇ ರಾ ಮಾ ನು ಜಾ ಯ ನ ಮಃ

# ಸ ಮ ರ್ಪ ಣೆ



ಅಖಿಲ ಜಗದೇಕಾಚಾರ್ಯರುಂ, ಅಖಿಲ ಜಗತ್ಸ್ವಾಮಿಯುಂ, ಅಸ್ಮತ್ಸ್ವಾಮಿಯುಂ
ಶಾಂತಶಮದಮಾದ್ಯನಂತಕಲ್ಯಾಣ ಗುಣಪರಿಪೂರ್ಣರುಂ,
ಶ್ರೀ ಶೇಷಾಂಶಸಂಭೂತರುಂ, ಶ್ರೀ ಮದ್ವೇದಮಾರ್ಗ
ಪ್ರತಿಷ್ಠಾಪನಾಚಾರ್ಯೋಭಯವೇದಾಂತಪ್ರವರ್ತನಾಚಾರ್ಯರುಂ,
ಸಂಯಮೀಚಕ್ರವರ್ತಿಸಾರ್ವಭೌಮರುಂ, ಅನುಗ್ರಹೈಕಮಯರುಂ,–ಆಗಿ

## ಶ್ರೀ ಯಾದವಾದ್ರಿಯೊಳ್ ಬಿಜಯಂಗೈದಿರ್ಪ
## ಶ್ರೀ ಭಗವದ್ರಾಮಾನುಜಾಚಾರ್ಯರ

ದಿವ್ಯಕರಕಮಲಂಗಳಲ್ಲಿ
ಶ್ರೀ ಯದುಗಿರಿ ಜೀರ್ಣೋದ್ಧರೋತ್ಸವ ಸಮಯದೊಳ್
ಮಕರ ಶುಕ್ಲ ಪುನರ್ವಸು ಉತ್ಸವ
ದಿವ್ಯ ಶುಭ ದಿನದೊಳ್

ಶ್ರೀ ಯದ್ವದ್ರೀಶ ಮಹಾಕಾವ್ಯ ಪ್ರಥಮ ಪುಷ್ಪಮಂ
ಸವಿನಯ ಭಕ್ತಿ ಪ್ರಪತ್ತಿ ಪೂರ್ವಕಂ
ಸಮರ್ಪಿಸುತ್ತಿರ್ಪ

ಭಕ್ತಾಂಘ್ರಿ ರೇಣು.
ನಲ್ಲಾಂದಿ ಶ್ರೀರಂಗಮ್ಮ



ನಿಗ್ರಹಾನುಗ್ರಹಗಳೆರಡುಂಟು

ನಮ್ಮೀ ಯದುಗಿರಿಯ ಚಲುವನಿಗೆ

ಅನುಗ್ರಹವೊಂದೇ

ಜಗತ್ಪಿತ-ರಾಮಾನುಜಗೆ—

(ಸಿಂಹವಾಣಿ)



ಶ್ರೀಃ

ಶ್ರೀ ಮತೇ ರಾಮಾನುಜಾಯ ನಮಃ

# ಸಮರ್ಪಣೆ



ಅಖಿಲ ಜಗದೇಕಾಚಾರ್ಯರುಂ, ಅಖಿಲ ಜಗತ್ಸ್ವಾಮಿಯುಂ, ಅಸ್ಮತ್ಸ್ವಾಮಿಯುಂ
ಶಾಂತಶಮದಮಾದ್ಯನಂತಕಲ್ಯಾಣ ಗುಣಪರಿಪೂರ್ಣರುಂ,
ಶ್ರೀ ಶೇಷಾಂಶಸಂಭೂತರುಂ, ಶ್ರೀ ಮದ್ವೇದಮಾರ್ಗ
ಪ್ರತಿಷ್ಠಾಪನಾಚಾರ್ಯೋಭಯವೇದಾಂತಪ್ರವರ್ತನಾಚಾರ್ಯರುಂ,
ಸಂಯಮೀಚಕ್ರವರ್ತಿಸಾರ್ವಭೌಮರುಂ, ಅನುಗ್ರಹೈಕಮಯರುಂ.—ಆಗಿ

## ಶ್ರೀ ಯಾದವಾದ್ರಿಯೊಳ್ ಬಿಜಯಂಗೈದಿರ್ಪ
## ಶ್ರೀ ಭಗವದ್ರಾಮಾನುಜಾಚಾರ್ಯರ

ದಿವ್ಯಕರಕಮಲಂಗಳಲ್ಲಿ
ಶ್ರೀ ಯದುಗಿರಿ ಜೀರ್ಣೋದ್ಧಾರೋತ್ಸವ ಸಮಯದೊಳ್
ಮಕರ ಶುಕ್ಲ ಪುನರ್ವಸು ಉತ್ಸವ
ದಿವ್ಯ ಶುಭ ದಿನದೊಳ್

ಶ್ರೀ ಯದ್ವದ್ರೀಶ ಮಹಾಕಾವ್ಯ ಪ್ರಥಮ ಪುಷ್ಪಮಂ
ಸವಿನಯ ಭಕ್ತಿ ಪ್ರಪತ್ತಿ ಪೂರ್ವಕಂ
ಸಮರ್ಪಿಸುತ್ತಿರ್ಪ

ಭಕ್ತ್ಯೋತ್ಪ್ರೇರೇಣ.

ನಲ್ಲುಂದಿ ಶ್ರೀರಂಗಮ್ಮ



ನಿಗ್ರಹಾನುಗ್ರಹಗಳೆರಡುಂಟು

ನಮ್ಮೀ ಯದುಗಿರಿಯ ಚಲುವನಿಗೆ

ಅನುಗ್ರಹವೊಂದೇ

ಜಗತ್ಪಿತ-ರಾಮಾನುಜಗೆ—

(ಸಿಂಹನಾಣಿ)



ಶ್ರೀರಸ್ತು

ಶ್ರೀಮತೇ ರಾಮಾನುಜಾಯ ನಮಃ

# ಮುನ್ನುಡಿ

ಶ್ರಿಯಃಪತಿಯಾದ ಶ್ರೀಮನ್ನಾರಾಯಣನು ಲೀಲಾರ್ಥವಾಗಿ ಈ ಜಗತ್ತನ್ನು ಸೃಷ್ಟಿಸಿದನು; ಅದರಲ್ಲಿನ ಈ ಭವಸಾಗರದಲ್ಲಿ ತೊಳಲಾಡುವ ಜೀವ ರಾಶಿಗಳ ಉದ್ಧಾರೇಚ್ಛೆಯಿಂದಅವುಗಳಿಗೆ ಕರಚರಣಾದ್ಯವಯವಗಳನ್ನು ಅನುಗ್ರಹಿಸಿದನು; ಆಗಲೂ ಈ ಸಂಸಾರ ಬಂಧನದಿಂದ ವಿಮುಕ್ತರಾಗದ ಅವರ ದುರವಸ್ಥೆಯನ್ನು ಕಂಡು ಮರುಗಿ ವೇದವೇದಾರ್ಥಗಳನ್ನು ಉಪದೇಶಿಸಿ ಸನ್ಮಾರ್ಗವನ್ನು ಪ್ರದರ್ಶಿಸಿದನು; ಆಗಲೂ ತನ್ನಲ್ಲಿ ವಿಮುಖರಾದ ಆ ಜೀವಿಗಳ ಉದ್ಧಾರೇಚ್ಛೆಯಿಂದ ನಾನಾಅವತಾರಗಳನ್ನು ತಳೆದು ತನ್ನ ಕಡೆಗೆ ಜೀವಿಗಳು ತಿರುಗುವಂತೆ ಪ್ರೇರಿಸಿದನು; ಆಗಲೂ ಕೂಡ ಆತ್ಮಜ್ಞಾನ ವಿಮುಖರಾದ ಆ ಜೀವಿಗಳ ಮೇಲಿನ ಅಪಾರ ಕಾರಣ್ಯ ವಾತ್ಸಲ್ಯಾದಿಗಳಿಗೆ ಮನಸೋತ ಆ ಪರಮಾತ್ಮನು ನಿತ್ಯಕೈಂಕರ್ಯ-ನಿರತರಾದ ನಿತ್ಯಸೂರಿಗಳನ್ನು ಜಗದುದ್ಧಾರಕವಾದ ಮಾರ್ಗಪ್ರದರ್ಶನಾದಿಗಳಿಗಾಗಿ ಭೂಲೋಕದಲ್ಲಿ ಅವತರಿಸುವಂತೆ ಆಜ್ಞೆಯಿತ್ತು ಕಳುಹಿಸಿದನು.

ಆ ನಿತ್ಯಸೂರಿಗಳೂ ಕೂಡ ಭಗವದಾಜ್ಞೆಯಿಂದ ಭಗವತ್ಕೈಂಕರ್ಯ ರೂಪವಾಗಿ ಈ ಭೂಲೋಕದಲ್ಲಿ ಅವತರಿಸಿ ಪರಮಾತ್ಮನ ವಿಗ್ರಹ-ವಿಭೂತಿ ಐಶ್ವರ್ಯಾದಿಗಳ ಜ್ಞಾನವನ್ನು ಈ ಜಗತ್ತಿಗೆ ಉಪದೇಶಿಸಿ, ಅದರಂತೆ ಆಚರಿಸಿ ತೋರಿಸಿ ಜೀವರಾಶಿಗಳನ್ನು ಸನ್ಮಾರ್ಗಕ್ಕೆ ಒಯ್ದರು.

ಈ ನಿತ್ಯಸೂರಿಗಳೂ ಅವರಿಗಾಗಿ ಕಣ್ಗಂಡ ಭಗವಂತನೂ ನೆಲೆನಿಂತ ದಿವ್ಯದೇಶಗಳಲ್ಲಿ 'ಸಾರತಮವಾದುದೇ ಮೇಲುಕೋಟೆ ಎಂದು ಲೌಕಿಕ ವ್ಯವಹಾರದಲ್ಲಿರುವ ತಿರುನಾರಾಯಣಪುರ.

ಈ ದಿವ್ಯಕ್ಷೇತ್ರದಲ್ಲಿ ಭಕ್ತಾನುಗ್ರಹಾರ್ಥವಾಗಿ ಅಖಿಲಜಗತ್ಪತಿಯೂ ಅಖಿಲಾಂಡಕೋಟಿಬ್ರಹ್ಮಾಂಡನಾಯಕನೂ, ಶ್ರೀಯಃಪತಿಯೂ, ಸಮಸ್ತ ಕಲ್ಯಾಣಗುಣಾಕರನೂ, ಆದ ಭಗವಂತನು ಸಾನ್ನಿಧ್ಯಮಾಡಿದ ಪರಿಯನ್ನೂ, ಈ ದಿವ್ಯಕ್ಷೇತ್ರವನ್ನು ಶೇಷಾಪರಾವತಾರ ಭೂತರಾದ ಶ್ರೀ ರಾಮಾನುಜರು ಜೀರ್ಣೋದ್ಧಾರಮಾಡಿ ನೆಲೆ ನಿಲ್ಲಿಸಿದ ಬಗೆಯನ್ನೂ ಕಾವ್ಯರೂಪದಲ್ಲಿ ವಿವರಿಸುವುದೇ ಈ ಯದ್ವದ್ರೀಶ ಚರಿತೆಯ ಉದ್ದೇಶ.

ಶ್ರೀಮನ್ನಾರಾಯಣನ ದರುಶನದಿಂದ ನನ್ನಲ್ಲಿ ಉಂಟಾದ ಅನುಭವಜನಿತ ಭಕ್ತಿಗೆ ಮನಸೋತ ತಿರುನಾರಾಯಣನು ತಾನೇ ತಾನಾಗಿ ನನ್ನ ಹೃದಯದಲ್ಲಿ ನಿಂತು ಮಂದಮತಿಯಾದ ನನ್ನ ಕೈಯ್ಯಿಂದ ಈ ಕಾವ್ಯವನ್ನು ತಾನೇ ಬರೆದಿರುವನು. ಭಗವದ್ರಾಮಾನುಜಾಚಾರ್ಯರ ಕೃಪೆಯಿಂದಲೂ ಮತ್ತು ಯದುಗಿರಿ ನಾಚ್ಚಿಯಾರ್ರವರ ಪುರುಷಕಾರದಿಂದಲೂ ಈ ಕಾವ್ಯವು ಹೊರಹೊಮ್ಮಿದೆ. ಏನೂ ತಿಳಿಯದ ಮಂದಬುದ್ಧಿಯಾದ ನಾನು ಬರೆದಿರುವ ಈ ಗ್ರಂಥದಲ್ಲಿ ಲೋಪದೋಷಗಳು ಕಂಡುಬಂದಲ್ಲಿ ಅದನ್ನು ಪ್ರಾಜ್ಞರು ಎಣಿಸದೆ ಬಾಲಭಾಷಿತಗಳನ್ನು ಹಿರಿಯರು ಕೇಳಿ,ನೋಡಿ, ಮುಗ್ಧರಾಗುವಂತೆ ಈ ಕವಿತೆಗಳಿಗೆ ಪ್ರೋತ್ಸಾಹ ಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

ಈಗ ಪ್ರಕಟವಾಗಿರುವ ಈ ಕಾವ್ಯವು ಯದ್ವದ್ರೀಶ ಚರಿತೆಯ ಒಂದು ಭಾಗ ಮಾತ್ರ.

ಮುಂದೆ ಮುದ್ರಣವಾಗಬೇಕಾದುವುಗಳು– ಆಂಡಾಳ್ ಕಲ್ಯಾಣ, ತಿರುಪ್ಪಾವೈ ವೈಭವದ ಹಾಡು ಮತ್ತು ಪದ್ಯಗಳು, ವೈರಮುಡಿ ಸೇವೆ, ಕಲ್ಯಾಣಿ

ವೈಭವ ಕಲ್ಯನಾರಾಯಣ ಯದುಗಿರಿ ನಾಚ್ಚಿಯಾರ್ ರಾಮಾನುಜಾಚಾರ್ಯರ ಮೇಲಿನ ಕೀರ್ತನೆಗಳು ಮುಂತಾದುವುಗಳು. (ಕೆಲವು ಹರಿಕಥಾರೂಪವಾಗಿವೆ)

ಕವಿತೆಯನ್ನು ಬರೆಯುವುದು ನಮ್ಮ ವಂಶಪಾರಂಪರ್ಯವಾಗಿ ಬಂದ ಒಂದು ಹವ್ಯಾಸ. ನನ್ನ ತಾಯಿ ಮತ್ತು ಪಿತಾಮಹರು ಅನೇಕ ಭಕ್ತಿಗೀತೆಗಳನ್ನು ರಚಿಸಿದ್ದಾರೆ. ನನ್ನ ಸೋದರಮಾವನವರಾದ ಸುಪ್ರಸಿದ್ಧರಾದ ಸಾಹಿತ್ಯ ವಿದ್ವಾನ್ ಎ. ಜಿ. ತಿರುನಾರಾಯಣೈಯ್ಯಂಗಾರ್‌ರವರು, ನನ್ನ ತಂದೆ ಮತ್ತು ಆಚಾರ್ಯರಾದ ನಲ್ಕುಂದಿ. ವೀರರಾಘವಾಚಾರ್ಯರವರು ಇವರ ಅನುಗ್ರಹದಿಂದ ಅಲ್ಪಮತಿಯಾದ ನಾನು ಈ ಕಾವ್ಯವನ್ನು ಬರೆಯಲು ಕಾರಣವಾಗಿದೆ.

ಈ ಪುಸ್ತಕವನ್ನು ಕನ್ನಡದಲ್ಲಿ ಅಚ್ಚು ಹಾಕಿಸಿ ಭಕ್ತಾದಿಗಳ ಮತ್ತು ಸಾಹಿತ್ಯಾರಾಧಕ ಉಪಯೋಗಕ್ಕಾಗಿ ಮುದ್ದಾಗಿ ಮುದ್ರಿಸಿ ಕೊಟ್ಟ ಶ್ರೀವಿಜಯ ಲಕ್ಷ್ಮೀ ಪ್ರೆಸ್ಸಿನ ಪ್ರೊಪ್ರೈಟರ್‌ರವರಾದ ಶ್ರೀ. B.V. ಆಳಹಿಯಮಣವಾಳ್ ರವರಿಗೆ ನಾನು ಕೃತಜ್ಞತಾಪೂರ್ವಕವಾದ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ.

ಇಂತು ಭಗವದ್ಭಕ್ತಪಾದರೇಣು

ನಲ್ಕುಂದಿ ಶ್ರೀರಂಗಮ್ಮ

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

# ಶ್ರೀ ಭೂವೈಕುಂಠ ಕಾವ್ಯಂ

ಅಥವಾ

# ಶ್ರೀ ಯದ್ವದ್ರೀಶ ಚರಿತಂ



## —ಮಂಗಳಾಚರಣ ಪ್ರಕರಣಂ—

ಯೋ ನಿತ್ಯಮಚ್ಯುತಪದಾಂಬುಜಯುಗ್ಮರುಕ್ಮ-
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ ॥
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥

ಶ್ರೀಲಕ್ಷ್ಮೀಕುಚಕುಂಕುಮಾಂಕಿತಕರಂ ಶ್ರೀರಾಮಕೃಷ್ಣಾರ್ಚಿತಂ
ಮಾಲಾಭಾಸಿತಕಂಧರಂ ಸುರವರಬ್ರಹ್ಮಾದಿಸಂಸೇವಿತಂ
ವೇಲಾತೀತಕೃಪಾಲವಾಲಮಮಲಂ ಶ್ರೀಯಾದವಾದ್ರೀಶ್ವರಂ
ಭೂಲೋಕಾಮರಪಾದಪಂ ಯತಿಸುತಂ ಸಂಪತ್ಕುಮಾರಂ ಭಜೇ

ಬಾಲೇಂದುಪ್ರತಿಮಾನಫಾಲಮಮಲಂ ಶ್ರೀಕೌಸ್ತುಭೋದ್ಭಾಸಿತಂ
ಲೀಲಾಮಾನುಷರೂಪಭಕ್ತವರದಂ ಶ್ರೀಯಾದವಾದ್ರೀಶ್ವರಂ
ನೀಲಾಂಭೋದಸುಕಾಯಮಬ್ಜನಯನಂ ಶ್ರೀವತ್ಸಚಿಹ್ನಾಂಕಿತಂ
ಶ್ರೀಲೋಲಂ ದಯೆಗೈಗೆ ಎಮ್ಮೊಳವಿದಾನಂದಮಂ ಭಕ್ತಿಯಂ

## ॥ ಗ್ರಂಥಕೃದಾಚಾರ್ಯಸ್ತುತಿ ॥

ಶ್ರೀಮಚ್ಛೇಷಕುಲೋದ್ಭವಂ ಗುರುವರಂ ಸಂಪತ್ಕುಮಾರಾತ್ಮಜಂ
ಶ್ರೀಮದ್ರಾಮಕಥಾಗಮಾದಿಚತುರಂ ಯದ್ವದ್ರಿನಾಥಾಶ್ರಯಂ
ಸೀಮಾತೀತಗುಣಾಶ್ರಯಂ ವರನೃಸಿಂಹ್ಮಾಚಾರ್ಯಪಾದಾಶ್ರಿತಂ
ಶ್ರೀಮದ್ರಾಘವನಾಮಧೇಯಮಹಿತಂ ವಂದೇ ಸದಾಽಹಂ ಮುದಾ ॥

ಇಂತು ಸಕಲದ್ರಮಿಡ-ಸಂಸ್ಕೃತತವೇದಪಾರಾವಾರಪಾರೀಣಸ್ಮೃತೀತಿಹಾಸಾ-
ಗಮಾದಿಸಕಲಶಾಸ್ತ್ರಸಂಪತ್ಸಂಯುಕ್ತ-ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾ-
ಚಾರ್ಯೋಭಯವೇದಾಂತಪ್ರವರ್ತನಾಚಾರ್ಯೇತ್ಯಾದಿ-ಸಾರ್ಥಕ
ವಿಶೇಷಣವಿಶಿಷ್ಟ-ಶ್ರೀಶೇಷಾಂಶಭೂತಾಖಿಲಜಗದೇಕಾಚಾರ್ಯ
ಶ್ರೀರಾಮಾನುಜಾರ್ಯಾಪರಾವತಾರಭೂತಶ್ರೀಗೋಮಠಂ-
ಶ್ರೀಯತೀಂದ್ರಪ್ರವಣವಂಶೋದ್ಭ-ವಶ್ರೀಮನ್ನೃಸಿಂಹಾರ್ಯ
ಪಾದಾಶ್ರಿತ-ಶ್ರೀರಾಘವಾರ್ಯ-ಚರಣಕಮಲಚಂಚರೀಕೆಯುಂ,
ಕವಿಕುಲಮನಸ್ಸರೋಜಿನೀರಾಜ- ಹಂಸೆಯುಂ,
ಆದ,-ಶ್ರೀ ಶ್ರೀರಂಗನಾಯಕೀ
ವಿರಚಿತಮಪ್ಪ,

**ಶ್ರೀ ಯದ್ವದ್ರೀಶಚರಿತಮಹಾಕಾವ್ಯದೊಳು**
**ಮಂಗಳಾಚರಣಪ್ರಕರಣಂ ಸಮಾಪ್ತಂ.**

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

# ಶ್ರೀಭಗವದ್ರಾಮಾನುಜಾರ್ಯಾವತಾರ-
# ತದ್ರಹಸ್ಯ-ವೈಭವಾದಿ-ಪ್ರಕರಣಂ

ಸೂಚನೆ:- ಪರಮಪದನಾಥನನು ಆಗಲುತ
ಹರಿಯು ವಿಭವಗಳನ್ನು ಅರುಹಲು
ಧರಣಿಯೊಳಗವತರಿಸಿದನು ವರಶೇಷ ಗುರುವಾಗಿ

ಕೇಳಿರೈ ವ್ಯಾಸಾದಿಮುನಿಗಳೆ
ಶ್ರೀಲತಾಂಗಿಯ ರಮಣನೊಲವಿನ
ಮೇಲೆನಿಪ ಯದುಗಿರಿಯ ವಿಭವವನ ವರಚರಿತೆಗಳಾ
ಪೇಳುವೆನು ಮನವೊಲಿದು ಸಜ್ಜನ
ಜಾಲಪದಕಭಿನಮಿಸಿ ವಿನಯದಿ
ತಾಳಿ ಸಂತೋಷದೊಳು ಹರಿಮಹಿಮೆಗಳ ವಿಭವಗಳಾ ೧

ಧರಣಿಯೊಳು ಕಲಿಪುರುಷನಿಂದಲಿ
ಮರೆಯುತಲಿ ತತ್ವಾರ್ಥವೆಲ್ಲವ
ನರರು ಪೂಜಿಸದಿಹರು ಹರಿಯನು ಮರುಳರಾಗುತ್ತಲಿ
ಅರುಹುತಲಿ ವೇದಗಳ ಹಳಿಯುತ
ಪರಿಪರಿಯಪಾರ್ಥಗಳ ಕಲ್ಪಿಸಿ
ಮೆರೆಯುವರು ಪಾಷಂಡಷಂಡರು ಅಧಿಕಸಂಖ್ಯೆಯಲಿ ೨

ಪುಸಿಯ ನುಡಿಯುತ ಹಳಿದು ನಿಗಮಕೆ
ಪೊಸತೆನಿಪ ದುರ್ವ್ಯಾಖ್ಯಾರ್ಥಗಳನತಿ
ಕುಶಲದಿಂ ವಾಚಿಸುತ ಬೋಧಿಸುತ ಜಗಕೆಲ್ಲಾ

ಪಸರಿಸುತ ದುಷ್ಕೃತಗಳೆಸಗುತ
ಉಸಿರುವರು ತನುತನ್ನದೆನ್ನುತ
ಒಸೆದು ತಮ್ಮನೆ ಈಶನೆನ್ನುತ ಮೆರೆಯುತಿಹರಿಳೆಯೊಳ್ ೩

ಶ್ರೀಧರನಗುಣಗಳನು ಹಳಿಯುತ
ವೇದದರ್ಥವನೆಲ್ಲ ತೊರೆಯುತ
ಮೊದಲಿ ಹರಿಕೀರ್ತನೆಗಳನು ಮಾಡದಲೆ ಮೆರೆದೂ
ಆದಿಕೇಶವನಡಿಯ ನೆನೆಯದೆ
ವೇದಬಾಹ್ಯರು ನಾಶಜೀವನ
ವಾದಿಗಳು ತಾವಾದರೀ ಕಲಿಯುಗದೊಳಗೆ ಮನುಜರ್ ೪

ಇಚ್ಚೆಯಿಂದಲಿ ರಾಜ್ಯವಾಳುತ
ಹೆಚ್ಚಿದರು ಕಲಿಯೊಳಗೆ ಮ್ಲೇಂಛರು
ಸಚ್ಚರಿತಗಳು ಆರ್‍ಯಧರ್ಮಗಳೆಲ್ಲ ತೊಲಗಿದವೂ
ಉಚ್ಚರಿಸಲಸದಳವು ಧರೆಯೊಳು
ಅಚ್ಚರಿಯು ಸಜ್ಜನಕೆ ತಾಸವ
ನಿಚ್ಚಲುಂ ನೀಡುತಲಿ ಮೆರೆದರು ಅಧಿಕಗರ್ವದೊಳು ೫

ಪರಮಧರ್ಮವ ತೊರೆದರೆಲ್ಲರು
ಅರಿವು ತೋರದೆ ದುರುಳರಾದರು
ಭರದಿ ಮ್ಲೇಂಛರು ಹರಿಯ ದೇವಾಲಯವ ಪುಗುತೈದಿ
ಮೆರೆವ ಉತ್ಸವ-ವಿಗ್ರಹಗಳನು
ಇರದೆ ಕೊಂಡೊಯ್ದುತಲಿ ಡಿಲ್ಲಿಯೊ
[1]ಳಿರುವ ಕೋಶಾಗಾರದಲಾ ತುಂಬಿದರು ಮನವೊಲಿದು[1] ೬

ಸಾಸುರಾಗದಿ ಕಲಿಯು ಪೊಕ್ಕನು
ಭಾನುಕೋಟಿಸಮಾನತೇಜನ
ಮೌನಿಜನ ಪೂಜಿತನ ತಿರುನಾರಣಪುರಿಗಾಗ

---

1. ಳಿರಸನಾಲಯದೊಳಗೆ ತುಂಬಿದರಾಗಮನವೊಲಿದು (ಕ), ಳಿರ:ವರಸನಾಲಯದಿ ಕೋಶಾಗಾರದೊಳಗಿಟ್ಟರ್ (ಚ).

ಏನಿದಚ್ಚರಿಯೆಂದೆನುತಲಾ
ಮೌನಿವ್ರಾತವು ತಾಪಸವಾನುತ
ಮಾನಸದಿ ಧ್ಯಾನಿಸುತ ಹರಿಯರ್ಚನೆಯನೆಸಗುತ್ತ ೭

ಇರಲು ಮ್ಲೇಂಛರು ಚಲುವರಾಯನ
ಭರದಿ ಕೊಂಡೊಯ್ದು ತಲಿ ಹರುಷದಿ
ಇರಿಸಿದರು ಡಿಲ್ಲೀಶನಾಲಯದೊಳಗೆ ಕೋಶದಲೀ
ತರಳೆ ಮ್ಲೇಂಛನ ರಾಜಸುತೆ ತಾ
ತರಣಿತೇಜದ ಚಲುವ[1]ಮೂರ್ತಿಯ[1]
ಕರದಿ ಪಿಡಿಯುತಲಾಡಿಸುತ ಪರಿಪರಿಯ ಲೀಲೆಯೊಳು ೮

ಮೆರೆವ ಅಂತಃಪುರಕೆ ಒಯ್ಯುತ
ವರ ರಕುನಮಯ ಚಲುವಪೀಠದಿ
ಹರಿಯನಿರಿಸುತ ವಿವಿಧದುಪಚಾರಗಳ ವಿರಚಿಸುತ
ಸರಿಗೆಳತಿಯರ ಕರೆದು ಕರದೊಳು
ಕಿರುನಗೆಯ ಚಲುವನನು ಆಡಿಸಿ
ಪರಮಹರುಷದಿ ನಲಿದು ನರ್ತಿಸುತಿದ್ದಳಾ ಬಾಲೇ ೯

ತನುವಿನೊಳು ಬ್ರಹ್ಮಾಂಡಕೋಟಿಗ
ಳನು ಅಡಗಿಸಿಹ ವಿಶ್ವಮಯ ತಾ
ಮನವೊಲಿದು ಸೇರಿದನು ಡಿಲ್ಲೀನಾಥಸುತೆ ಕರದಿ
ಮುನಿಗಳೊಗ್ಗಿಲಿ ಮಾನಸದಿ ಹರಿ
ಧ್ಯಾನಮಾಡುವ ಜಪತಪದೊಳಿರೆ
ಜ್ಞಾನನಿಧಿ ತಿರುನಾರಣನು ಸೇರಿದನು ಹೃತ್ತದಲಿ ೧೦

ತಾಪಸೋತ್ತಮರೆಲ್ಲ ನೋಡುತ
ಪಾಪಪೂರಿತವಾದ ಕಲಿಯೊಳು
ಶ್ರೀಪತಿಯ ಮಾನಸದಿ ಪೂಜಿಸುತಾಂಗ ಮರುಗುತಿರೇ

———

1. ರಾಯನ (ಕ).

ಈಪರಿಯ ದುಶ್ಚರಿತಗಳ ತಾ
ಶ್ರೀಪತಿಯು ನಿರಕಿಸುತ ಬಳಲುತ
ಆ ಫಣಿನಿವಾಸದೊಳು ಅಡಗಿದ ಯದುಗಿರಿಗೆ ಒಡೆಯಾ ೧೧

ಸುತ್ತ ಬೆಳೆಯಿತು ದೊಡ್ಡ ಹುತ್ತವು
ಮತ್ತೆ ಮುಚ್ಚಲು ತರುಲತೆಗಳವು
ಉತ್ತಮದ ಆನಂದಮಯದಾ ವಿಮಾನಮರೆಯಾಯ್ತು
ಬಿತ್ತರವನೇನೆಂಬೆ ಯದುಗಿರಿ
ಎತ್ತಣದು ತಾನೆಂಬ ಪರಿಯಲಿ
ಚಿತ್ತವನು ಭ್ರಮೆಗೊಳಿಸಿತಾ ಕಲಿಪುರುಷ ಮಹಿಮೆಯಲಿ ೧೨

ಮಾನವರ ಈಪರಿಯ ಕೃತ್ಯವ
ಹಾನಿಯುತ್ಸಾಚಾರಗಳ ತಾ
ಶ್ರೀನಿಲಯ ನಿರಕಿಸುತ ಬೇಸರಪಡುತದುಗುಡದಲಿ
ಮಾನವರ ಕಣ್ಮನಕೆ ಕಾಣದೆ
ಸಾನುರಾಗದಿ ನಿತ್ಯಮುಕ್ತರ
ದಾನವಾರಿಯು ಸೇರಿದನು ಶ್ರೀಪರಮಪದದೊಳಗೆ ೧೩

ಪರಮಪದದೊಳು ಪರಮಪುರುಷನು
ಮೆರೆವ ಮಣಿಮಯಮಂಟಪದೊಳಗೆ
ಸಿರಿಸಹಿತ ವರಫಣಿಯ ಪೀಠದಿ ಕುಳ್ಳಿರುತಲಿರಲೂ
ಮಿರುಗುತಿಹ ಚಾಮರವ ಬೀಸುತ
ಲಿರಲು ಪರಿಜನಜಾಲಗಳ ತಾ
ನಿರಕಿಸುತಲೀಪರಿಯ ವಚನವ ನುಡಿದ ಕರುಣಾಳು ೧೪

ಇಂದೆಸಗೆ ಈಪರಿ ವಿಲಾಸಗ
ಳೊಂದು ಮನಕಾನಂದವೀಯವು
ಇಂದು ಧರೆಯೊಳು ವೇದಗಳಿಗಪಾರ್ಥ ಕಲ್ಪಿಸುತಾ

ಮಂದಮತಿಗಳು ಒಂದುಗೂಡುತ
ತಂದಿಹರು ದೂಷ್ಯಾರ್ಥಗಳ ತಾ
ನಿಂದು ಸೈರಿಪೆನೆಂದೆನುತ ಹರಿ ಪೇಳಿ ಬಿಸುಸುಯ್ದು ೧೫

ಶ್ರುತಿಯನಿತ್ತೆನು ಸ್ಮೃತ್ತಿನುಯನಿತೆ
ಕ್ಷಿತಿಯೊಳವತರಿಸಿದೆನು ಮಾನವ
ತತಿಗೆ ಸನ್ಮತಿಯಿತ್ತು ನಿಗಮಾರ್ಥಗಳನರುಹಿದೆನು
ಮತಿವಿಕಳರನು ಮಡುಹಿ ಧರ್ಮದ
ಅತಿಶಯಿತತ್ವಗಳ ನಿಲಿಸುತ
ವ್ರತವಿದೆನಗೆಂದೆನು ಭಕ್ತರಿಗಭಯವಿತ್ತಿಹೆನು ೧೬

ಏನು ಮಾಡಿದರೇನು ಇಳೆಯೊಳು
ಶೂನ್ಯವಾಯಿತು ವೇದದರ್ಥವು
ಹಾನಿಯನು ನಾನೆಂತು ಸೈರಿಪೆ ಪೇಳಲಸದಳವೂ
ಶೂನ್ಯರು ಆಗುತಲಿ ಮಾನವರು
ಮನವೊಲಿದೆಮ್ಮ ತತ್ವವನೆಲ್ಲ
ಅನುದಿನ ಹಳಿಯುತಲಿ ಮತಿಹೀನರಾಗಿಹರೂ ೧೭

ಎಂದು ಮರುಗುತ ವಾಸುದೇವನು
ಮುಂದೆ ನಿಂತಿಹ ನಿತ್ಯಮುಕ್ತರ
ವೃಂದವನು ನೋಡುತಲಿ ಪೇಳಿದ ಮಧುರವಾಣಿಯೊಳು
ಇಂದು ಧರೆಯೊಳು ಮಾನವರು ತಾ
ವಂದು ಮರೆತರು ವೇದದರ್ಥವ
ನೊಂದು ಇದಕೇಗೈವೆ ನಾನೆಂದೆನುತಲಳಲಿದನು ೧೮

ಬಳಿಕಲಾ ವೈಕುಂಠನಾಥನು
ಬಳಿಗೆ ಕರೆಯುತಲಾದಿಶೇಷನ
ಇಳೆಯ ಅತ್ಯಾಚಾರಗಳ ನೆನೆನೆನೆದು ಚಿಂತಿಸುತ

ತಿಳಿಸಿದನು ವ್ಯಸನಮರುಗಿ ಕರುಣದಿ
ನೆಲದೊಳುದಿಸುತ ಮನುಜರನು ನೀ
ಸಲಹಿ ತತ್ವದ ನೆಲೆಯ ನಿಲಿಸೈ ಭುವಿಯೊಳೆಲ್ಲೆಡೆ[1]ಯೋಳ್[1] ೧೯

ಅರಿಯರೈ ನರರೆಲ್ಲ ಕಿಡುವರು
ದುರಿತಗಳನಾಚರಿಸಿ ನಿಗಮಕೆ
ಬರಿದೆ ದೂಷ್ಯಾರ್ಥಗಳ ಕಲ್ಪಿಸಿ ಬರೆಯುತಲಿ ಜನಕೇ
ಮರೆತು ವರತತ್ವಾರ್ಥಗಳ ತಾ
ವಿರಚಿಪರು ದೂಷ್ಯಾರ್ಥಗಳನಾ
ಸರಿಯೆ ಇದಕೇಗೈವೆ ಪೇಳೆಂದೆನುತ ಬಿಸುಸುಯ್ದ ೨೦

ಲಾಲಿಸೆಲೆ ಫಣಿರಾಜ ಎನ್ನಯ
ಮೇಲೆನಿಪ ತತ್ವಾರ್ಥವೆಲ್ಲವ
ಪೇಳಿ ಧರೆಯೊಳು ಜನಕೆ ನೀನಾಚಾರ್ಯನಾಗುತಲೀ
ಲೀಲೆಯಿಂದವತರಿಸು ನರರಿಗೆ
ಶೀಲಸುಗುಣವ ಕಲಿಸು ಎನ್ನುತ
ಶ್ರೀಲತಾಂಗಿಯ ರಮಣ ಸಂತೈಸಿದನು ಶೇಷನಾ ೨೧

ತಳೆದೆ ಇಳೆಯೊಳು[2] ಶೇಷನಾಗುತ
ಬಳಿಕೆನಗೆ ನೀನನುಜನಾಗುತ
ತೊಳಲಿ ಕಾನನವೆಲ್ಲವನು ನೀನೊಳಿಗವ ಗೈದೂ
ನಲವಿನಿಂದೆಸಗುತ್ತ ಬಳಿಕಲಿ
ಹಲಧರನು ನೀನಾಗುತಲೆ ಬಹು
ಬಳಲಿದೇಮುದೆರದೊಳೆನ್ನೊಡ[3]ನ[3]ಲದೆ ಭುವಿಯೊಳಗೇ ೨೨

ಇಂದಿರೇಶನ ಅಂದವಚನವ
ಆಂದದಿಂದಲಿ ಕೇಳಿ ಶೇಷನು
ನೊಂದು ನುಡಿದನು ಪದಕಮಲದಲಿ ಶಿರವನಿರಿಸುತಲೀ

---

1. ಡೊಳೂ 2. ಯೊನು (ಕ) 3. ಗ (ಕ).

ಒಂದಸರಿಯೆಸು ಮುರಹರನೆ ನೀ
ನಿಂದು ಎನ್ನನು ಕರಪಿಡಿದು ಮುದ
ದಿಂದ ಪಾಲಿಸು ಭುವಿಗೆ ಪೋಗುವೆನೆಂದು ಅರುಹುತಲೀ ೨೩

ಬಳದೆ ನಿನ್ನ ಪದಾಬ್ಜ ಯುಗಳದ
ನಲವು ಪಡೆದವಲೋಕನದೊಳಿಳೆ-
ಯೊಳಗೆ ನಾನಿರಲಾರೆ ಮಾಧವನೆನು ತಲೊರಲುತಲೀ
ಬಲುವಿನಯದಿಂ ಬಾಗಿ ನಮಿಸುತ
ನಳಿನಲೋಚನ ನಿನ್ನಬಿಟ್ಟಗ
ಲಲಾರೆನೆನುತ್ತ ಕಂಬನಿ ತುಂಬಿದನು ದುಗುಡದಲೀ ೨೪

ಪುಳಕವಾಂತು ಶರೀರವೆಲ್ಲವು
ತುಳುಕೆ [1]ಕಣ್ಜಲ[1]ಗಳಡಿ ಗದ್ಗದ
ತಳೆದ ರವದಿಂ ಶಿರವನೊಡ್ಡುತ ಹರಿಯ ಚರಣದಲೀ
ಬೆಳಗಿದನು ಸಾಸಿರಫಣಾಳಿ
ಗಳಿಂದಲಾರತಿಯೆತ್ತಿ ಹರಿ
ಎಳೆತಳಿರ್ಪೋಲುವ ಚರಣಯುಗಳವ ಬಳಲುತಲಿ ಶೇಷಾ ೨೫

ಇಂದಿರೆಯ ನೋಡುತ್ತಲಾಗಲೆ
ಬಂದು ಶೇಷನ ಫಣೆಗಳನು ಆ-
ನಂದದಿಂದಾಲಿಂಗಿಸುತಲಿನಿವಾತಿನಿಂ ನಗುತಾ[2]
ಕಂದಬಾರೈ ಇಳೆಯೊಳೆನಗೆ ನೀ
ತಂದೆಯಾಗುತ ಮಂದಮತಿಗಳ
ಕುಂದುಗಳ ತಿದ್ದುತಲಿ ಎನ್ನಯ ತತ್ವಗಳನರುಹೈ ೨೬

ಎಂದು ನುಡಿಯುತ ಮಂದಹಾಸದಿ
ಬಂದು ನಿತ್ಯರ ಮುಕ್ತಗಡಣಗ-
ಳಿಂದೆಸೆವ ಸಭೆಯೊಳಗೆ ಕೈಯೆತ್ತುತ್ತ ಮಾಧವನೂ

---

1. ಕಂಬನಿ (ಕ) 2. ತ (ಕ)

ಇಂದು ಎನ್ನ ವಿಭೂತಿಯೆರಡನು
ಅಂಡದಿಂದಿತ್ತಿಹೆನು ಇಳೆಯೊಳು
ಎಂದನುದಿಸು ಫಣಿರಾಜ ನೀ ಯತಿ೨ಾಜನಾಗುತಲೀ ೨೭

ಸಿರಿಯೆ ಶಂಖವೆ ವರಸುದರ್ಶನ
ಮೆರೆವ ಸೇನಾನಾಥ ಮುಕ್ತರೆ
ಒರೆವ ನಿತ್ಯರೆ ಕೇಳಿ ಎನ್ನಯ ತತ್ವಗಳನಿಳೆಯೋಳ್
ನರರಿಗರುಹುತಲರಿವ ನೀಡುತ
ಮೆರೆವ ಬಾಹ್ಯಕುದೃಷ್ಟಿಗಳ ತಾ-
ನಿರವೆ ಶೋಷಣೆಗೈವನೀ ಶೇಷನು ಸರಾಗದೊಳು ೨೮

ಎನುತಲಾ ವೈಕುಂಠನಾಥನು
ಘನದಿ ನುಡಿಯುತಲಾದಿಶೇಷನ
ತನುವನಾಲಿಂಗಿಸುತಲಿನಿವಾತಿನಲಿ ಮನ್ನಿಸುತಾ
ಮನದಿ ದುಗುಡುವನಿನಿತು ಮಾಡದೆ
ಮನವ ಮಾಡುತ ಭರದಿ ಇಳೆಯೊಳು
ಘನತರದ ಆಚಾರ್ಯನಾಗವತರಿಸು ನೀನೆನಲೂ ೨೯

ಬಾಗಿ ನಮಿಸುತಲಾದಿಶೇಷನು
ಪೋಗಲಾರೆನು ದೇವ ಇಳೆಯೊಳ-
ಗೀಗ ನಿನ್ನನು ಅಗಲಿ ಜೀವಿಸಲಾರೆ ಮಾಧವನೇ
ಬೇಗ ಕರುಣಿಸಿ ಎನ್ನ ಪೊರೆಯೈ
ಯೋಗಿಜನಹೃದಯಾಬ್ಜ ಮಂದಿರ
ನೀಗಿಸೊ ಭವಬಂಧನವ ಕಳೆದೆನ್ನ ನೀಪೊರೆಯೋ ೩೦

ಮರೆಯಲಾರೆನು ನಿನ್ನ ಸೇವೆಯ
ಮರೆಯಲಾರೆನು ನಿನ್ನ ವಿಭವವ
ಮರೆಯುಲಾರೆನು ನಿನ್ನ ಈ ವೈಕುಂಠಪದವಿಗಳಾ

ಮರೆಯಲಾರೆನು ನಿನ್ನ ಕರುಣಾ
ವರಕಟಾಕ್ಷದ ಪರಿಯ ನಿತ್ಯದ
ಸಿರಿಯನೆಂದೆನುತಾಗ ಬಿಸುಸುಯ್ದನು ಫಣೀಶನು ತಾ ೩೧

ಅಂಧನನು ಕೈಪಿಡಿದು ಅಂದದಿ
ಮುಂದೆ ಪಥದೊಳು ನಡೆಸುವಂದದಿ
ತಂದೆ ನೀ ಬಂದೆನ್ನ ಕರುಣದಿ ಕರಪಿಡಿದು ಕಾಯ್ಯೆ
ಒಂದನರಿಯೆನು ನೊಂದ ಮನದೊಳು
ಬಂದು ಪಾಲಿಸೊ ದಯವ ತೋರಿಸೊ
ಇಂದಿರಾಧವ ನಿನ್ನ ಬೇಡುವೆನೆನುತಲೊರಲುತಲೀ ೩೨

ನಿನ್ನ ಆಜ್ಞಾವಚನದೊಳು ನಾಂ
ಮುನ್ನ ಧರೆಯೊಳು ಪುಟ್ಟಿದರು ನೀ-
ಯೆನ್ನ ಪೊರೆಸು ಜ್ಞಾನವಿತ್ತೆನಗೊಲಿದು ಹಿತದಿಂದಾ
ಘನ್ನಮಹಿಮನೆ ಕೈಬಿಡದೆ ಪೊರೆ
ಯೆನ್ನ ಅಪರಾಧಗಳನೆಣಿಸದೆ
ಇನ್ನು ಪೋಗುವೆ ಭುವಿಗೆನುತ ನಮಿಸುತಲಿ ಶಿರಬಾಗೀ ೩೩

ಮರುಗುತಲಿ ಶ್ರೀಹರಿಯ ಚರಣಕೆ
ಎರಗಿ ಶ್ರೀಪರವಾಸುದೇವನ
ತಿರುತಿರುಗಿ ನೋಡುತಲಿ ಆಜ್ಞಾವಚನವನು ಸ್ಮರಿಸೀ
ಪರಮಪದದಿಂದ ಹೊರಟು ಶೇಷನು
ಧರಣಿಯೊಳು ಅವತರಿಸಿದನು ಸಿರಿ
ಪೆರುಂಪುದೂರೆನ್ನಿಪ ದಿವ್ಯಸ್ಥಳದಿ ಹರುಷದೊಳೂ ೩೪

ಮೆರೆವ ದ್ರಾವಿಡದೇಶದೊಳು ಶ್ರೀ
ಪೆರುಂಪುದೂರೆಂದೆನಿಪ ಊರೊಳು
ಇರುವ ಕೇಶವಸೋಮಯಾಜಿಯ ಕಾಂತಮತಿಯೆನಿಸಾ

ತರುಣಿಯುದರದಿ ಜನಿಸಿದರು ವರ
ತರಣಿತೇಜಸಮಾನರಾಗುತ
ಮೆರೆವ ವಿಪ್ರೋತ್ತಮರ ಕುಲಮಣಿದೀಪರೆಂದೆನಿಸೀ ೩೫

ವರ ರವಿಯ ತೇಜದಲಿ ರಾಜಿಪ
ವರಕುಮಾರಗೆ ನಾಮಕರಣವ
ವಿರಚಿಸಿದರಾ ಸೋಮಯಾಜಿಯು ಮನ ಒಲಿದು ನಲಿದೂ
ಕರಸಿ ವಿಪ್ರೋತ್ತಮರ ಮುದದಿಂ
ಭರದಿ ರಾಮಾನುಜರು ಎನ್ನುತ
ಸುರುಚಿರದ ವರ ಪೆಸರನಿಟ್ಟರು ಲಕ್ಷ್ಮಣಾರ್ಯರಿಗೇ ೩೬

ಲಲನೆಕಾಂತಿಮತಿಯ ಕುವರಗೆ
ನಲವಿನಿಂದಲಿ ಸೋಮಯಾಜಿಯು
ಒಲಿದು ವಿದ್ಯಾಭ್ಯಾಸ–ಉಪನಯನಗಳ ವಿರಚಿಸಲೂ
ಬಳಿಕ ಶ್ರೀರಾಮಾನುಜಾರ್ಯರು
ಕಲಿತು ಪರತತ್ವಗಳ ವಿದ್ಯೆಯ
ಒಲಿದು ಗೃಹಸ್ಥಾಶ್ರಮವ ಸ್ವೀಕರಿಸಿದರು ಹರುಷದಲೀ ೩೭

ಇರಲು ಗೃಹಧರ್ಮದಲಿ ಶ್ರೀಹರಿ
ಪರತರಾನುಗ್ರಹದಿ ತತ್ವವ
ನರಿತು ಪಂಚಾಚಾರ್ಯರಿಂ ಬಹುಶ್ರುತಿಯ ಸಾರಗಳಾ
ತೊರೆದು ಗ್ರಹಸ್ಥಾಶ್ರಮವ ಬೇಗದಿ
ಉರುತರದ ಶಾಸ್ತ್ರಾರ್ಥಗಳ ನಲವಿಂ
ಪರಿಚರಿಸಿ ಪರವಾದಿಗಳ ವಾದದಲಿ ಜೈಸುತಲಿ ೩೮

ಮತಿಯುತರು ಯತಿಸಾರ್ವಭೌಮರು
ಅತಿಶಯದ ಪರಮಾರ್ಥತತ್ವವ
ಮಿತಿಯು ಇಲ್ಲದ ಸಕಲಶಾಸ್ತ್ರಾರ್ಥಗಳನಭ್ಯಸಿಸೀ

ಶ್ರುತಿಗಪಾರ್ಥವ ಕಲ್ಪಿಸಿದ ಕು
ಮತಿಗಳ ದುರ್ಮತಗಳನು ಖಂಡಿಸಿ
ಶ್ರುತಿಯ ಸಾರವ ಸಾರುತಿಹ ಉದ್ಗ್ರಂಥಗಳ ರಚಿಸೀ ೩೯

ಭರದಿ ಸನ್ಯಾಸಾಶ್ರಮವ ಸ್ವೀ
ಕರಿಸಿ ದಿಗ್ವಿಜಯಗಳ ಮಾಡುತ
ಹೊರಟು ಶಾರದೆಯೊಡನೆ ವಾದಿಸಿ ವಾದದಲಿ ಗೆಲಿದೂ
ಬಿರುದ ಪಡೆಯುತ ಭಾಷ್ಯಕಾರರು
ಮೆರವ ವಿಶಿಷ್ಟಾದ್ವೈತದರ್ಶನ
ದುರುತರದ ಸ್ಥಾಪನೆಯ ವರ ಆಚಾರ್ಯರೆಂದೆನಿಸೀ ೪೦

ಸಾರತರ ಶ್ರೀಭಾಷ್ಯಗ್ರಂಥವ
ನೀರಿದಾನಂದದಲಿ ರಚಿಸುತ
ಧೀರತನದಿಂದಿಳೆಗೆ ಬೋಧಿಸಿ ಹರಿಯ ಮಹಿಮೆಗಳಾ
ಸಾರುತಲಿ ತಿರುಮಂತ್ರದರ್ಥವ
ಚಾರುತರವಿಭವದಲಿ ಧರೆಗಾ-
ಚಾರ್ಯರಿವರೆಂದೆನಿಸಿ ಎಳೆರವಿಯಂತೆ ರಾಜಿಸಿದರ್ ೪೧

ಚೋಳರಾಜನ ಹಗೆತನವ ತಾ
ತಾಳಲಾರದೆ ಹೊರಟು ಬೇಗದಿ
ಮೇಲೆನಿಪ ಕರ್ಣಾಟದೇಶಕೆ ಮನವೊಲಿದು ಬಂದೂ
ಖೂಳ ಚಾರ್ವಾಕನು ಪಾಷಂಡಿಗಳ
ಲೀಲಾಮಾತ್ರದಿಂ ಪ್ರತಿವಾದಿಗಳ
ಜಾಲಗಳ ವಾದದಲಿ ಗೆಲಿದರು ಪರಮಹರುಷದಲೀ ೪೨

ಗೆಲಿದು ಹರಿಮಹಿಮೆಗಳ ತೋರಿಸಿ
ಒಲಿದು ಶ್ರೀವೈಷ್ಣವನಾಗಿಸಿ
ಬಲಿದ ಬಿಟ್ಟಿಯದೇವನಂ ವಿಷ್ಣುವರ್ಧನನು ಎನಿಸೀ

ಬಳಿಕ ತೊಂಡನ ಊರೊಳಿರುತಲಿ
ನಲವಿನಿಂದರ್ಚಿಸುತ [1]ನಂಬೀ[1]
ಚಲುವನಾರಾಯಣನ ಸನಿಹದಿ ವಾಸಿಸಿದರೊಲವಿಂ ೪೩

ಬಿಡುತ ದ್ರಾವಿಡದೇಶವನು ತಾ
ನಡೆತಂದು ಕರ್ಣಾಟಕದೋಳ್
ಒಡನೆ ಜೈನರ ವಾದದಲಿ ಗೆಲ್ಲುತಲಿ [2]ಮುದವಾಂತು[2]
ಕಡಲಶಯನನ ನಂಬಿನಾರಾಯಣನ
ಬಿಡದರ್ಚಿಸುತ ತೊಂಡನ ಊರೊಳಿರೆ
ಕಡುಹರುಷದಲಿ ಶಿಷ್ಯವೃಂದಗಳೊಡನೆವೆರಸುತ್ತಾ ೪೪

ಧರಿಸಿ ಊರ್ಧ್ವಗಡ ಪುಂಡ್ರವದು ತಾ-
ನಿರದಿರಲು ಕೊರಗುತಲಿ ಮಲಗಿರೆ
ಬರೆದ ಕನಸಿನೊಳ್ ನಗುತ ತಿರುನಾರಣನು ಒಲವಿಂದಾ
ಭರದಿ ಬಂದೆದುಗಿರಿಗೆ ನೀವದ
ಧರಿಸಿ ಎನ್ನ ಉದ್ಧರಿಸಿ ಪ್ರೇಮದಿ
ಉರುತರದ ಕಲ್ಪೋಕ್ತದಿಂದಲಿ ಪೂಜಿಸಿರಿ ಎನುತಾ ೪೫

ಅರುಹಿ ಕನಸಿನ ಪರಿಯ ಶಿಷ್ಯರ
ವೆರಸುತಚ್ಚರಿಪಡುತಲೊಡನೆ
ಭರದಿ ಬಂದರು ಯದುಗಿರಿಗೆ ಶ್ರೀಹರಿಯನರಸುತ್ತಾ
ಉರುತರದ ಕಾನನವ ಕಾಣುತ
ನರಹರಿಯ ಶಿಖರದ ಮನೋಹರ
ದಿರವನೀಕ್ಷಿಸಿ ಬೆರಗುವಡೆಯುತ ಬಂದರೆತಿ[3]ರಾಜರ್[3] ೪೬

ಬಳಿಕಲಾ ಯತಿವರರು ಯದುಕುಲ
ತಿಲಕ ನಾರಾಯಣನ ಹುಡುಕುತ
ತುಳಿಯುತಲಿ ಕಲ್ಮುಳ್ಳುಗಳ ಬಳಲುತ್ತಲಿ ಎವ್ರಡಕ್ಕಲಿ

---

1 ನಮ್ಮೀ (ಕ) 2. ಹರುಷದಲೀ (ಚ). 3. ವರರೂ (ಕ).

ಕೆಲಬಲದ ಮುಳ್ಳಿಡಿದ ಕಿರುತರು
ಗಳು ತನುವಿನೊಳು ಸೋಕುತಿರ
ಲಾ ಲತೆಗಳನು ಬಿತ್ತರಿಸಿ ನಡೆವರು ಯದುಗಿರಿಯ ವನದೀ ೪೭

ಎಳೆರವಿಯ ತೇಜದಲಿ ಮೆರೆಯುವ
ಬಳುಕುತಿಹ ಸುಕುಮಾರವಪುವೊಳು
ಜಿಲಜಿಲನೆ ಸುರಿಯುತಿಹ ಕೆನ್ನೀರುಗಳನೊರೆಸುತಲೀ
ಬಳಸುತಿಹವರಿಜನರ ಮುನ್ನಿಸು
ತಲೆ ಹರಿಯ ನೆರೆ ಹುಡುಕುತಿರಲಾ
ತುಲಸಿವನವದು ಗೋಚರಿಸಿತೇನೆಂಬೆನಚ್ಚರಿಯಾ ೪೮

ಇಂತು ಸಕಲಪ್ರವಿತತ-ಸಂಸ್ಕೃತವೇದಪಾರಾವಾರಪಾರೀಣ-ಸ್ಮೃತೀತಿಹಾಸಾಗಮಾದಿ-ಸಕಲಶಾಸ್ತ್ರಸಂಪತ್ಸಂಯುಕ್ತ-ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯೋಭಯವೇದಾಂತಪ್ರವರ್ತನಾಚಾರ್ಯೇತ್ಯಾದಿ-ಸಾರ್ಥಕವಿಶೇಷಣವಿಶಿಷ್ಟ-ಶ್ರೀಶೇಷಾಂಶಭೂತಾಖಿಲಜಗದೇಕಾಚಾರ್ಯ-ಶ್ರೀರಾಮಾನುಜಾರ್ಯಾಪರಾವತಾರಭೂತ-ಶ್ರೀಗೋಮಠಂ ಶ್ರೀಯತೀಂದ್ರ ಪ್ರವಣವಂಶೋದ್ಭವ-ಶ್ರೀಮನ್ನೃಸಿಂಹಾರ್ಯಪಾದಾಶ್ರಿತ-ಶ್ರೀರಾಘವಾರ್ಯಚರಣಕಮಲಚಂಚರೀಕೆಯುಂ, [1]ಯದ್ವದ್ರಿನಿವಾಸರಸಿಕೆಯುಂ[1] ಕವಿಕುಲಮನಸ್ಸರೋಜಿನೀರಾಜಹಂಸಿಯುಂ,- ಆದ,

ಶ್ರೀ ಶ್ರೀರಂಗನಾಯಕೀವಿರಚಿತಮಪ್ಪ,

## ಶ್ರೀಯದ್ವದ್ರೀಶಚರಿತಮಹಾಕಾವ್ಯದೊಳು

ಶ್ರೀರಾಮಾನುಜಾರ್ಯಾವತಾರಾದಿಕತದ್ಯದುಗಿರಿದಿವ್ಯಸ್ಥಲಸ್ಥಶ್ರೀನಾರಾಯಣಾಂತರ್ಗತತುಲಸೀವನಮಧ್ಯಸ್ಥ-ವಲ್ಮೀಕದರ್ಶನಾಂತಕಥಾವಿವೇಚನಸಂಧಿಯುಂ

ಸಮಾಪ್ತಂ

---

1. ಈ ಭಾಗಃ ಕ'ಪ್ರತಿಯಲ್ಲಿ ಮಾತ್ರ ಇದೆ.

# ಶ್ರೀ ಭಾಷ್ಯಕಾರರ

## ಶ್ರೀಸಿಂಹಭೂಧರದರ್ಶನ–ಶ್ರೀನಾರಾಯಣಾರ್ಚನಾದಿ–

## ವಿವರಣ ಸಂಧಿ

ಸೂಚನೆ:– ಮನಹರುಷದಲಿ ಭಾಷ್ಯಕಾರರು
ನೆನೆದು ಯದುಗಿರಿನಾಥನರುಹಿಹ
ಇನಿಯವಚನವ ಶಿರದೊಳಾನುತ ಹರಿಯನರ್ಚಿಸಿದರ್॥

ನಳಿನಳಿಪ ನವನಳಿನತುಲಸೀ
ಚಲುವಮಣಿಮಾಲೆಯನು ಧರಿಸುತ
ಬಿಳಿಯನಾಮವ ತಳೆದು ಫಣೆಯೊಳು ಎಳೆರವಿಯ ಪೋಲುತಲೀ
ಥಳಥಳಿಪ ಕೋಮಲತ್ರಿದಂಡವು
ಪೊಳೆಯುತಿರೆ ಶ್ರೀಹರಿಯ ವಿಭವವ
ಇಳೆಗೆ ತೋರಿದ ಭಾಷ್ಯಕಾರರ ಚರಣಕೆರಗುವೆನೂ ೧

ಹರಿಯ ಮಹಿಮೆಯನರುಹಿ ಧರಣಿಗೆ
ನರರನುದ್ಧರಿಸುತಲಿ ಹರುಷದಿ
ವರವಕುಳರಾಭರಣವೆಂದೆನಿಸಿರ್ಪ ಸುರುಚಿರದಾ
ಮೆರೆಯುತಿರುತಿಹ ವಕುಳಮಾಲೆಯ
ಧರಿಸಿ ಕೊರಳೊಳು ಕರಮುಗಿಯುತ
ಹರಿಯ ಚರಣವ ತೋರಿಸಿದ ಗುರುಚರಣಕೆರಗುವೆನೂ ೨

ಬಂದರಾ ಯತಿವರರು ಶಿಷ್ಯರ
ವೃಂದವನುವೆರಸುತಲಿ ಯದುಗಿರಿ
ಗಂದು ತೊಂಡನ ಊರ ಬಿಡುತಲಿ ಸ್ತುತಿಸುತಲಿ ಹರಿಯಾ
ಮುಂದೆ ಬರುತಿರೆ ನರಹರಿಯ ಗಿರಿ
ಯಂದು ಕಾಣಲು ಬೆರಗುವಡೆಯುತ
ಇಂದಿರೇಶನ ಅರಸುತಲಿ ಚರಿಸಿದರು ವಿಪಿನದಲೀ ೩

Funding: Tattva Heritage Foundation,Kolkata. Digitization: eGangotri.



ಬಳಿಕಲಾ ಯತಿವರರು ಯದುಕುಲ
ತಿಲಕ ನಾರಾಯಣನ ಅರಸುತ
ತುಳಿಯುತಲಿ ಕಲ್ಮುಳ್ಳುಗಳ ಬಳಲುತಲಿ ಎಡವುತಲೀ
ಕೆಲಬಲದ ಮುಳ್ಳಿಡಿದ ಕಿರುತರು
ಗಳು ತನುವಿನೊಳು ಸೋಕುತಿರ
ಲಾ ಲತೆಗಳನು ಒತ್ತರಿಸಿ ನಡೆವರು ಹರಿಯ ಸ್ಮರಿಸುತಲೀ ೪

ಎಳರವಿಯ ತೇಜದಲಿ ಮೆರೆಯುವ
ಬಳುಕುತಿಹ ಸುಕುಮಾರವಪುವೊಳು
ಜಿಲಜಿಲನೆ ಸುರಿಯುತಿಹ ಕೆನ್ನೀರುಗಳನೊರಸುತಲೀ
ಬಳಲುತಿಹ ಪರಿಜನರ ಮನ್ನಿಸು
ತಲೆ ಹರಿಯು ನೆರೆ ಹುಡುಕುತಿರಲಾ
ತುಲಸಿವನವದು ಗೋಚರಿಸಿತೇನೆಂಬೆನಚ್ಚರಿಯಾ ೫

ಬರುತಿರಲು ಕಲ್ಮುಳ್ಳ ತುಳಿಯುತ
ಚರಣಕಮಲದಿ ಸುರಿವ ನೆತ್ತರ
ಪರಿಕಿಸದೆ ಲೆಕ್ಕಿಸದೆ ಮರುಗದೆ ನೋವನರಿಯದಲೀ
ತಿರುಗಿದರು ಯದುಗಿರಿಯ ವನದಲಿ
ಸ್ಮರಿಸಿದರು ಶ್ರೀಹರಿಯ ವಚನವ
ಮರುಗಿದರು ಕರುಣಾಳು ಮೈದೋರೆನುತ ಹಲುಬುತಲೀ ೬

ಹರಿಯು ಪೇಳಿದ ಕುರುಹು ಕಾಣದು
ಪರಿಯಿದಕೆ ನಾನೇನಗೈವೆನು
ದರುಶನವ ಕರುಣಾಕರನೆ ನೀಡೆನುತ ಬೇಡುತಲೀ
ಪರಿಮಳದ ಕಂಪುಗಳನೆರಚುವ
ಸರಸಿಜದ ಸರಸಿಗಳ ತಟದೊಳು
ವರತುಲಸಿವನಗಳೊಳು ತರುಲತೆಗಳೊಳು ಅರಸುತಲೀ ೭

ಮರುಗುವರು ಹಂಬಲಿಸುವರು ಕಾ
ತರಿಸುವರು ತೊಳಲುವರು ಬಳಲುತ
ಹರಿಯಿರವ ಕಾಣದೆ ನೆಲೆಯ ತಿಳಿಯದೆ ಚರಿಸಿದರು ಬಿಡದೇ
ಕುರುಹುಗಳ ತಿಳಿಯುತ್ತಲರುಹುವರು
ಪರಿಜನರ ಮನ್ನಿಸುತ ನಡೆದರು
ಸರಸಿಜನ ನಿಜಪಿತನೆ ನೀನೆಲ್ಲಿರುವೆ ಪೇಳನುತಾ ೮

ನೊಂದುಮನದೊಳು ಇಂದಿರೇಶನು
ಅಂದವಚನವು ತಪ್ಪದೆಂದಿಗು
ಎಂದೆನುತ ಪರಮಾರ್ಥತತ್ವವ ನೆನೆದು ಬೆರಗಾಗೀ
ಅಂದು ಕನಸಿನೊಳಿತ್ತ ದರುಶನ
ದಿಂದೆನಗೆ ನೀನೇಕೆ ಈಯದೆ
ಇಂದು ಪರಿಕಿಪೆಯೇಕೆನುತಲೊರಲಿದರು ಅಡಿಗಡಿಗೇ ೯

ವೇದಪುಷ್ಕರಣಿಯನು ಕಾಣುತ
ಲಾದರದೊಳಾ ಪುಣ್ಯತೀರ್ಥದೊಳ್
ಮೋದದಿಂದಲಿ ಮಿಂದು ಕಾಷಾಯ ತ್ರಿದಂಡಗಳಾ
ಮಾಧವನ ಕೊಂಡಾಡಿ ಧರಿಸುತ
ವೇದದರ್ಥವನರುಹಿದೀ ಸ್ಥಳ
ಮೇದಿನಿಯೊಳು ಪವಿತ್ರವಿದು ಎಂದೆನುತ ಪೊಗಳುತಲೀ ೧೦

ಪರಿಪರಿಯ ಗಿರಿಗುಹೆಗಳನು ನರ
ಹರಿಯ ಗಿರಿಶಿಖರದ ಮನೋಹರ
ದಿರವ ನೋಡುತ ತರುಲತೆಗಳನು ಒತ್ತರಿಸುತಾಗಾ
ಬರುತಿರಲು ವರತುಲಸಿಗಿಡವದು
ಉರುತರದಿ ಎಸೆದಿರಲು ಮಂಗಳ
ತರದ ವಲ್ಮೀಕವನು ಕಂಡತಿಮುದವ ಗೊಳ್ಳುತಲೀ ೧೧

ಹಿರಿಯವಲ್ಮೀಕವಿದು ಹರಿಯಿಹ
ಪರಿಯ ಚಿಹ್ನೆಯು ತೋರುತಿದೆ
ವರ ಯದುಗಿರೀಶನ ಮಧುರವಾಣಿಯು ಫಲಿಸಿತೆಂದೆನುತಾ
ತೆರಳಿದರು ಉತ್ತರದ ದೆಸೆಯೊಳು
ಪೊರೆವ ಕಲ್ಯಾಣಿಯನು ಕಾಣುತ
ವರಹದೇವರ ಚರಣಕಭಿವಂದಿಸುತ ಹರುಷದಲೀ ೧೨

ಧರಿಸಿದರು ವಿಮಲೋರ್ಧ್ವಪುಂಡ್ರವ
ಇರದೆ ಗದ್ಯತ್ರಯದ ಯಾಮುನ
ಗುರುವರರ[1] ಸ್ತುತಿಗಳನು ಪಠಿಸುತಾನಂದವಾನುತಲೀ
ತರುತ ಶುದ್ಧೋದಕವ ಮಾಧವ
ನಿರುವ ವಲ್ಮೀಕದೊಳು ಎರೆಯುತ
ಲಿರಲು ಕಂಡರು ವರದತಿರುನಾರಾಯಣನ [2]ಲಿಗಾ[2] ೧೩

ಜಯ ನಮೋ ಜಗದಾದಿಕಾರಣ
ಜಯ ನಮೋ ವರಲಕುಮಿರಮಣ
ಜಯ ನಮೋ ಪರವಾಸುದೇವನೆ ಪರಮಮಂಗಳನೇ
ಜಯ ನಮೋ ಸರಸಿಜದಳಾಂಬಕ
ಜಯ ನಮೋ ಸುರವರಕರಾರ್ಚಿತ
ಜಯ ನಮೋ ಮುನಿಮಾನಸಾಂಬುಜವಾಸ ಜಗದೀಶ ೧೪

ಇದುವೆ ತಿರುನಾರಾಯಣನು ತಾ
ಒದಗಿ ಪೇಳಿದ ಹಿರಿಯ ಹುತ್ತವು
ಇದೆಯೆ ತುಲಸೀಗಿಡವು ಬೆಳೆದಿಹ ಕುರುಹಿದೇ ನಿಜವೂ
ಇದೆಯೆ ದಕ್ಷಿಣಬದರಿಕಾಶ್ರಮ
ಇದೆಯೆ ತಿರುನಾರಾಯಣಾದ್ರಿಯು
ಇದೆಯೆ ಯದುಕುಲತಿಲಕನಾಡಿದ ಯಾದವಾಚಲವೂ ೧೫

---

1 ವಿರಚಿತದವು (ಕ) 2. ಬೇ (ಕ)

ಕಂಡೆ ನಾಸೀ ಶಾಮಲನ ಉ
ದಂಡವಿಕ್ರಮಬ್ರಹ್ಮವಂದ್ಯನ
ಪುಂಡರೀಕಾಯುತಸುನೇತ್ರನ ಮಂಗಳಾತ್ಮಕನಾ
ಕಂಡೆ ಋಮಿಜನನ್ವಂದಸ್ತುತ್ಯನ
ಕಂಡೆ ಕರುಣಾಕರನ ವಿಮಲನ
ಕಂಡೆ ಸುಂದರಯಾದವಾದ್ರಿಯ ಸಿರಿಯ ನಾರಣನಾ ೧೬

ಬಾಲನಾಗುತ ಪಾಲಕಡಲೊಳು
ಲೀಲೆಯಿಂದಲಿ ಲಕುಮಿಯೊಡನಾ
ಮಲಗಿದೆನು ನೀವೆಮ್ಮ ಶಯ್ಯಾಸನವು ಆಗುತಲೀ
ತಾಳಿ ತಾಯ್ತನದಿಂದಲೆನ್ನನು
ಲೀಲೆಯೊಳು ತೂಗುತಲಿ ನಲಿಯುವ
ಲೀಲಾಮಾನುಷವಿಗ್ರಹರೆ ನೀವೆನಗೆ ಪಿತನಹುದೂ ೧೭

ಅಂದು ದೇವಕಿಯುದರದೊಳು ಗೋ
ವಿಂದ ಪುಟ್ಟಿದ ತೆರದೊಳೀಗಲಿ
ಇಂದು ಈ ವಲ್ಮೀಕ[1]ದಿಂದು[1]ದಿಸಿದೆನು ಮುದವಾಂತೂ
ಬಂದು ಉದ್ಧರಿಸಿದಿರಿ ಎನ್ನನು
ತಂದೆ ನೀವದರಿಂದಲೀಗಲಿ
ಎಂದು ಕೊಂಡಾಡಿದನು ಮುರಹರ ಭಾಷ್ಯಕಾರರನು ೧೮

ತೋರಿದಿರಿ ಧರೆಗೆನ್ನ ನೀಗಲೆ
ತೋರಿದಿರಿ ತತ್ವಾರ್ಥವೆಲ್ಲವ
ತೋರಿದಿರಿ ಭೂವೈಕುಂಠವಿದು ಎಂದೆನುತ ಮನುಜರಿಗೇ
ತೋರಿದಿರಿ ನಿಗಮಾರ್ಥಸಾರವ
ತೋರಿದಿರಿ ಲೀಲಾವಿಭೂತಿಯು
ತೋರಿದಿರಿ ಎನ್ನೀ ಬಗೆಯ ನಿತ್ಯೈಶ್ವರ್ಯವಿಭವಗಳಾ ೧೯

1. ದೊಳು (ಖ)

ತೊಳಲಿದಿರಿ ಕಾನನದಿ ಎಲ್ಲೆಡೆ
ತೊಳಲಿದಿರಿ ಅರಸುತಲಿ ಎನ್ನನು
ಕಳವಳದಿ ಯದುಗಿರಿಯೊಳೆಲ್ಲೆಡೆಯಲೆದ ಕಾರಣದಿಂ
ಹೊಳೆವ ಎಳೆರವಿಯನ್ನು [1]ಹೋ[1]ಲುವ
ಲಲಿತವಾಗಿಹ ನಿಮ್ಮ ಕಾಯವು
ಕಳೆಯ ಗುಂದಿದೆ ಎನುತ ಮರುಗಿದ ಕರುಣಮೂರುತಿಯೂ ೨೦

ಪರಮಕಲ್ಯಾಣಗುಣಪೂರ್ಣನ
ಪರಮಪುರುಷನ ಸಿರಿಯರಮಣನ
ದರುಶನವ ಮಾಡುತಲಿ ಶ್ರೀಯತಿವರರು ನಲಿಯುತಲೀ
ಕರಮುಗಿದು ಶಿರಬಾಗಿ ನಮಿಸುತ
ವರದತಿರುನಾರಣನೆ ಮುದದಿಂ
ಕರೆದೆನಗೆ ದರುಶನವನಿತ್ತಿರಿ ಎಂದು ಸ್ತುತಿಸಿದರೂ ೨೧

ಎನುತ ಕೊಂಡಾಡುತಲಿ ಶ್ರೀಹರಿ
ಗನುನಯದಿ ನಮಿಸುತಲಿ ತನ್ನಯ
ತನುವ ಚಾಚುತ ಪದಯುಗವ ಪಿಡಿದೆರಗತಿಭಕ್ತಿಯಲೀ
ಮನಸೊಳಾನಂದಿಸುತ ತ್ವರಿತದಿ
ಮನವೊಲಿದು ಕಲ್ಯಾಣಿತೀರ್ಥದಿ
ವನಜನಾಭಗೆ ಮಜ್ಜನವ ಮಾಡಿದರು ಆರ್ತಿಯಲೀ ೨೨

ವಾರಿಜಾಕ್ಷನ ಸೊಬಗ ನೋಡುತ
ಮೂರುದಿನವಾರಾಧಿಸುತ ಬಹು
ಮೀರಿದಾನಂದದಲಿ ಕರಸಿದರು ಅರ್ಚಕರನಾಗಾ
ಚಾರುತರವಿಭವದಲಿ ಅರ್ಚಿಸಿ
ಪಾರಮಾರ್ಥದ ತತ್ವಗಳ ಮನ
ಸಾರ ಭಜಿಸುತ ಸ್ತುತಿಸಿದರು ತಿರುನಾರಣನ ಮುದದಿಂ ೨೩

---

1. ಪೋ (ಕ)

Funding: Tattva Heritage Foundation,Kolkata. Digitization: eGangotri.



ಪೂಜಿಸಿದರಾ ಯತಿವರರು ರವಿ
ತೇಜತಿರುನಾರಾಯಣನ ಪದ
ರಾಜೀವಗಳಿಗಭಿವಂದಿಸುತ ಬಹುಭಾವಭಕ್ತಿಯಲೀ
ಜಾಜಿಮಲ್ಲಿಗೆತುಲಸಿಸುಮಗಳ
ರಾಜಿಸುವ ಮಣಿಹಾರ ಪೊಳೆಯುವ
ಮೂಜಗವ ಮೋಹಿಸುವ ತಿರುನಾರಾಯಣನ ಒಲವಿಂ ೨೪

ಪಂಚವಿಧಭಕ್ಷ್ಯಗಳ ಭೋಜ್ಯವ
ಪಂಚಬಾಣನ ತಾತಗರ್ಪಿಸಿ
ವಂಚಿಸದೆ ಭಕ್ತರಿಗೆಲ್ಲರಿಗೆ ವಿನಿಯೋಗವಂ ಮಾಡಿ
ಚಿಂತಿತಾರ್ಥವನೀವ ಯದುಗಿರಿ
ಚಂಚಲಾಕ್ಷಿಯ ಲಕ್ಷ್ಮಿಯರಸನ
ಇಂಚರದಿ ಸ್ತುತಿಸಿದರು ನಿಗಮಾಳಿಗಳ[1] ಸ್ತುತಿಗಳೊಳು[1] ೨೫

ದ್ರಾವಿಡಾಮ್ನಾಯದೊಳು ಮಿಗಿಲೆನೆ
ಸಾವಿರದ ಪದ್ಯದೊಳು ಮೆರೆಯುವ
ಶ್ರೀವರನ ತಿರುನಾರಾಯಣನ ಮಹಿಮೆಯನು ಬಣ್ಣಿಸುತಾ
ಕೋವಿದರು ಮನವೊಲಿದು ಪಾಡುವ
ಭಾವಭಕ್ತಿಯ ಹತ್ತು ಪದ್ಯವ
ಸ್ವಾಮಿ ತಿರುನಾರಾಯಣನಿಗರ್ಪಿಸಿ ಪೂಜಿಸಿದರಾಗಾ ೨೬

ಕರಸಿದರು ಶ್ರೀರಂಗದಿಂದಲಿ
ಮೆರೆವ ವಿಪ್ರೋತ್ತಮರ ಶಿಷ್ಯರ
ಕರೆಸಿದರು ಐವತ್ತೊರಬರುವರೆಂಬುವ ಬುಧಜನರಾ
ಕರಿಸಿದರು ಅರ್ಚಕರ ವರಪರಿ
ಚಾರಕರರ ಪರಿಜನರೆಲ್ಲರ
ಹರಿಯನಾರಾಧಿಸಲು ಹರುಷದಿ ಲಕ್ಷ್ಮಣಾರ್ಯರು ತಾವ್ ೨೭

---

1. ಚಿರಗಾಗೇ (ಕ)

ವರದತಿರುನಾರಾಯಣಗೆ ಪರಿ
ಪರಿಯ ನಿತ್ಯದ ಪಕ್ಷಮಾಸದ
ಮೆರೆವ ಸಂವತ್ಸರದ ಉತ್ಸವಗಳನು ಮಾಡಿಸಲೂ
ಮೆರೆವ ಉತ್ಸವವಿಗ್ರಹವು ತಾ
ನಿರದಿರಲು ಮನದೊಳಗೆ ಅಳಲುತ
ಕರುಣನಿಧಿ ಶ್ರೀಯದುಗಿರೀಶನ ಧ್ಯಾನಿಸುತಲಿರಲೂ ೨೮

ಭರದಿ ಪೇಳಿದ ಕನಸಿನೊಳು ಯತಿ
ವರರಿಗತಿಹರುಷದೊಳು ಯದು
ಗಿರಿಯೊಡೆಯತಿರುನಾರಾಯಣನು ವರಮಂದಹಾಸದೊಳೂ
ಮರುಗದಿರಿ ಯತಿಸಾರ್ವಭೌಮರೆ
ಅರಸನರಮನೆಯೊಳಗೆ ಡಿಲ್ಲಿಯೊ
ಳಿರುವ ಉತ್ಸವವಿಗ್ರಹವ ನೀವ್ ತರುವುದೆಂದೆನುತಾ ೨೯

ಅಚ್ಚರಿಯ ಪಡುತಾಗ ಯತಿವರ
ರೆಚ್ಚರವ ಗೊಳ್ಳುತಲಿ ಮುದದಿಂ
ದಚ್ಚುತನ ವರಮಧುರವಾಣಿಯ ನೆನೆನೆನೆದು ಮನದೀ
ಸ್ವಚ್ಛವಾದುದಕದಲಿ ಮೀಯುತ
ಹಚ್ಚಿದರು ವರ ಊರ್ಧ್ವಪುಂಡ್ರವ
ಮೆಚ್ಚಿ ನಡೆದರು ಡಿಲ್ಲಿಯ ನಗರಕೆ ಹರಿಯ ಆಜ್ಞೆಯಲೀ ೩೦

ಬಂದು ಡಿಲ್ಲಿಯ ನಾಥನರಮನೆ
ಮುಂದೆ ನಿಲ್ಲಲು ದ್ವಾರಪಾಲಕ
ರಂದು ನಡೆತಂದಾಗ ಬಾದರ್ಷಹಗೆ ಬಿನ್ನವಿಸೇ
ನಿಂದ ಯತಿರಾಜರನು ಕರಸುತ
ಬಂದು ತವಕದಿ ಭೂವರನು ತಾ
ತಂದಿವಸ ಕುಶಲವನು ಕೇಳಿದ ಭಾಷ್ಯಕಾರರನೂ

ಯಾರು ನೀವೆತಿವರರೆ ಇಲ್ಲಿಗೆ
ಸಾರಿಬಂದ ನಿಮಿತ್ತವೇನಿದು
ದಾರಮತಿ ನೀವೆನಗೆ ತಿಳಿಪುದು ನಿಮ್ಮ [1]ಕಾರಿಯವಾ[1]
ತೋರುತಿದೆ ಎಳೆರವಿಯ ತೇಜವು
ತೋರುತಿದೆ ಶುಭಲಕ್ಷಣಂಗಳು
ಮೀರಿದಾಯಾಸದಲಿ ತನುಬಳಲಿಹುದು ಕಳೆಗುಂದಿ ೩೨

ಕೇಳು ಡಿಲ್ಲಿಯನಾಥ ನಿನ್ನಯ
ಆಲಯದೊಳಿದುಗಿರಿಯ ಉತ್ಸವ
ನೀಲದಳಲೋಚನನು ಚಲುವನಾರಾಯಣನು ಇಹನೂ
ಮೇಲೆನಿಪ ಆ ದಿವ್ಯಮೂರ್ತಿಯ
ಲೀಲೆಯಿಂದಲಿ ಈವುದೆನಗೆ ವಿ
ಶಾಲಮತಿ ಕೇಳೆಂ [2]ದರುಹಿ[2]ದರು ಯತಿವರರು ನಸುನಗುತಾ ೩೩

ಎನಲು ಮನಹರುಷವನು ತಾಳುತ
ಜನಪ ಯತಿವರರೊಡನೆ ನಡೆದನು
ಘನತರದ ಕೋಶಾಗಾರದಲಿ ವಿಗ್ರಹಗಳಿರುವೆಡೆಗೇ
ದಿನಕರನ ಪೋಲುತಿಹ ತೇಜನ
ಕನಕವಸನನ ಯದುಗಿರೀಶನ
ಕನಕಮಾಲಿನಿಪೂಜಿತನ ಅರಸಿದರು ಯತಿರಾಜರ್ ೩೪

ಕಾಣೆ ಯದುಗಿರಿನಾಥನಿರುತಿಹ
ತಾಣವನು ನಾನೇನಗೈವೆನು
ಕೇಣವನು ತೋರಿದನೆ ತಿರುನಾರಾಯಣನು ಎನಗೇ
ಕಾಣೆನೊಂದನು ನೊಂದೆ ಮನದೊಳು
ಏಣಲೋಚನನೆಲ್ಲಿ ಇಡುವನೋ
ಮಾಣದರಸಿದಪೆನಗೆ ಡೊರೆಯನು ಯದುಗಿರಿಯ ನಾಥಾ ೩೫

---

1 ಭೀಪ್ಸುರಸೂ (ಕ). 2. ದುಹುರಿ (ಕ)

ಅರಸಿದರು ಸಿರಿಯರಸನನು ಪರಿ
ಪರಿಯೊಳಾಲೋಚಿಸುತ ಯತಿವರ
ರರಸನಾಲಯದೊಳಗೆ ಕೋಶಾಗಾರದಲಿ ಬಿಡದೆ
ದೊರೆಯದಿರೆ ಸಿರಿಚಲುವರಾಯನು
ಪಂಬಗುತಲಿ ಬಳಲುತಲಿ ಏಳುತ
ಲಿಪಲು ನೇಕದ ನಗುತ ಶ್ರೀಹರಿ ಭಾಷ್ಯಕಾರರಿಗೆ ೧೪

ಇರುವೆನರಸನ ಕುವರಿಯಂತಃ
ಪುರದಿ ವಿವಿಧದ ವೈಭವದ ಉಪ
ಚಾರದೊಳಗಿರುವೆನೆನ್ನನು ಕರೆದುಕೊಂಡು ಬರೆ
ಬರುವೆನಲಸದೆ ಯದುಗಿರಿಗೆ ನೀ
ಬಿಡದೆ ಕೊಂಡೊಯ್ಯುವುದು ಎನ್ನನು
ವಿರಚಿಪುದು ಎನಗಾಗಮೋಕ್ತದ ಉತ್ಸವಂಗಳನೂ
೧೫

ಹರಿಯ ವಚನವ ಕೇಳಿ ಯತಿವರ
ಬೆರಗುವಡೆಯುತ ಮನದೊಳಗೆ ತಾ
ಕರುಣನಿಧಿ ಶ್ರೀರಾಮಪ್ರಿಯನ ಧ್ಯಾನಿಸುತಲಾಗ
ಭರದಿ ಕರೆದರು ಸ್ತುತಿಯ ಮಾಡುತ
ಪರಮಪುರುಷನ ಯದುಗಿರೀಶ
ಪರಮಭಕ್ತಿಯೊಳಾಗ ಕರಮುಗಿಯುತಲಿ ಮನವೊಲಿದು ೧೬

ಎಲ್ಲಿರುವೆ ಬಾ ಯದುಗಿರಿಯ ಸಿರಿ
ನಲ್ಲ ಚಲುವನಾರಾಯಣನೆ ನೀ
ನಿಲ್ಲಿಹ ಸ್ಥಳವೆಲ್ಲಿಹುದು ನಾನರಿಯೆ ಮೊರೆಯಿಡುವೆ
ನಿಲ್ಲದಲಸದೆ ಬಂದು ನಿನಯ್ಯ
ಸೊಲ್ಲ ಸಾರ್ಥಕಗೊಳಿಸು ಮುರಹರ
ಬಲ್ಲಿಯಲ್ಲದ ಸಕಲಜಗದಧಿನಾಥ ಸುರುಚಿರನೆ ೧೭

ಬೇಗ ಬಾರೈ ರಾಮಪ್ರಿಯನೆ
ಕೂಗಿ ಕರೆಯುವೆ ನಿನ್ನ ಕರುಣದೊ
ಈಗ ತೋರ್ಪೈ ಕೃಪೆಯ ಶ್ರೀವೈಕುಂಠನಾಥನೆ ನೀ
ಬಾಗಿ ನಮಿಸುವೆ ಕರವ ಮುಗಿಯುತ
ಸಾಗಿ ಬಾರೈ ಭಕ್ತವತ್ಸಲ
ಆಗಮಾರ್ಚಿತ ಯಾದವಾದ್ರಿಯ ಚಲುವನಾರಣನೆ ೩೯

ಕೂಗಿ ಕರೆದರೆ ದಯವು ಬಾರದೆ
ನಾಗಶಯನನೆ ತಡವು ಮಾಡದೆ
ಈಗ ಪರಿಕಿಸದೆನ್ನ ನಡೆತಂದೆದುರಿನೊಳು ನಿಲ್ಲೈ
ಆಗಮಾದಿಸ್ತುತಿಗಳಿಂದಲಿ
ಬೇಗ ಅರ್ಚಿಸಿ ಮುದವ ಪೊಂದುವೆ
ಸಾಗಿಬಾರೈ ಪರಮಪುರುಷನೆ ಯದುಗಿರಿಯ ಒಡೆಯಾ ೪೦

ಎಂದು ಕರೆಯಲು ನೊಂದು ಮನಸೊಳು
ಇಂದಿರೇಶನು ದಯವ ತೋರುತ
ಬಂದನಾಗ ಶ್ರೀ ಮಂದಗಮನದಿ ಅಡಿಯನಿಕ್ಕುತಲಿ
ಮುಂದೆ ಕುಳಿತಿಹ ಭಾಷ್ಯಕಾರರ
ಮಂದಹಾಸದಿ ನಿಂದು ನೋಡುತ
ಬಂದು ಕುಳಿತನು ತಂದೆಯೆನ್ನುತ ತೊಡಲು ಸಾತಿನಲಿ ೪೧

ಮಂಗಳಂ ಯತಿಸಾರ್ವಭೌಮಗೆ
ಮಂಗಳಂ ಶ್ರೀಲಕ್ಷ್ಮಣಾರ್ಯಗೆ
ಮಂಗಳಂ ಶ್ರೀಕಾಂತಮತಿಸುಕೃತಸಾರಸುಚರಗೆ
ಮಂಗಳಂ ಶ್ರೀಭಾಷ್ಯಕಾರಗೆ
ಮಂಗಳಂ ರಾಮಾನುಜಾರ್ಯಗೆ
ಮಂಗಳಂ ಶ್ರೀಭೂತಪುರಿನಾಯಕಶಿಖಾಮಣಿಗೆ ೪೨

ಮಂಗಳಂ ಶ್ರೀರಾಮಪ್ರಿಯಗೆ
ಮಂಗಳಂ ಸಂಪತ್ಕುಮಾರಂಗೆ
ಮಂಗಳಂ ಶ್ರೀಕನಕಮಾಲಿನಿಪೂಜಿತಗೆ ಹರಿಗೆ
ಮಂಗಳಂ ಯತಿರಾಜಕುವರಗೆ
ಮಂಗಳಂ ಯದುಶೈಲದೀಪಗೆ
ಮಂಗಳಂ ಶ್ರೀರಾಮಕೃಷ್ಣಾರ್ಚಿತಗೆ ಸುಂದರಗೆ ೪೩

ಇಂತು ಸಕಲ-ದ್ರಾವಿಡ-ಸಂಸ್ಕೃತವೇದಸಾರಾವಾರಪಾರೀಣ-ಸ್ಮೃತೀತಿಹಾಸಾ
ಗಮಾದಿಸಕಲಶಾಸ್ತ್ರಸಂಪತ್ಸಂಯುಕ್ತ-ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾ
ಚಾರ್ಯೋಭಯವೇದಾಂತಪ್ರವರ್ತನಾಚಾರ್ಯೇತ್ಯಾದಿ-ಸಾರ್ಥಕ
ವಿಶೇಷಣವಿಶಿಷ್ಟ-ಶ್ರೀಶೇಷಾಂಶಭೂತಾಖಿಲಜಗದೇಕಾಚಾರ್ಯ
ಶ್ರೀರಾಮಾನುಜಾರ್ಯಾಪರಾವತಾರಭೂತ-ಶ್ರೀಗೋವಿಂದಂ
ಶ್ರೀಯತೀಂದ್ರಪ್ರವಣವಂಶೋದ್ಭವ-ಶ್ರೀಮನ್ನೃಸಿಂಹಾರ್ಯ
ಪಾದಾಶ್ರಿತ-ಶ್ರೀರಾಘವಾರ್ಯ-ಚರಣಕಮಲಚಂಚರೀಕೆಯುಂ,
ಕವಿಕುಲಮನಸ್ಸರೋಜಿನೀರಾಜಹಂಸೆಯುಂ,
ಆದ,- ಶ್ರೀಃ ಶ್ರೀರಂಗನಾಯಕೀ
ವಿರಚಿತಮಪ್ಪ,-

## ಶ್ರೀ ಯದ್ವದ್ರೀಶಚರಿತಮಹಾಕಾವ್ಯದೊಳ್

ಶ್ರೀ ರಾಮಾನುಜಾರ್ಯಕೃತಸಿಂಹಭೂಧರದರ್ಶನ-ವೇದಪುಷ್ಕರಣೀಸುಹಿಮಾ
ನುಸಂಧಾನ-ವಲ್ಮೀಕೋದ್ಧಾರಾನಂತರಕ್ಷೀರಾಭಿಷೇಕಪೂರ್ವಕ
ಶ್ರೀನಾರಾಯಣಾರ್ಚನ-ತದಾಜ್ಞಾನುಸಂಧಾನಪೂರ್ವಕಡಿಲ್ಲೀನಗರಗಮನ-
ಡಿಲ್ಲೀಶಕುಮಾರಿಕಾಂತಃಪುರಸ್ಥ ಪ್ರೇಮಪುತ್ರ, ಸ್ವರೂಪಸಮಾಗತ-
ರಾಮಪ್ರಿಯಮಂಗಳಾಶಾಸನಕರಣಾದಿಕಥಾವಿವೇಚನಸಂಧಿಯುಂ
ಸಮಾಪ್ತಂ.

# ಶ್ರೀ ಭಾಷ್ಯಕಾರಕೃತ

## ರಾಮಪ್ರಿಯಯಾನಯಾನ–ಉತ್ಸವಮೂರ್ತಿಪ್ರತಿಷ್ಠಾಪನ ಪೂರ್ವಕ–ಶ್ರೀನಾರಾಯಣನಿತ್ಯೋತ್ಸವಾದಿ ನಿಯಮನಪೂರ್ವಕ ಮಂಗಳಾಶಾಸನಾದಿ

## ವಿವರಣಸಂಧಿ

ಸೂಚನೆ:—

ಪರಮಪುರುಷನ ಚಲುವನಾರಾಯಣ
ಭರದಿ ವರರಾಮಾನುಜಾರ್ಯರು
ಕರೆದು ಕರೆತಂದರು ಸುರನರರು ಬೆರಗಾಗೆ ಯದುಗಿರಿಗೆ

ಕರೆದ ವರರಾಮಾನುಜಾರ್ಯರ
ಮೊರೆಯ ಕೇಳುತ ಚಲುವರಾಯನು
ಹೊರಟು ಮಂದಿಯ ನಿವಾಸವ ಬಿಡುತ ತವಕದಲಿ।
ತರಳನಂದದಿ ರೂಪನಾನುತ
ಸರಸರಸು ಲೀಲೆಯನು ತೋರುತ
ಪರುಷವಿಂದಲಿ ಬಂದನಾ ಗೋವಿಂದ ನಲವಿಂದಾ ೧

ಚರಣದಲಿ ನೂಪುರವು ಗೆಜ್ಜೆಯು
ವರರವವು ಘಲುಘಲುರೆನುತ್ತಲಿ
ತಿರೆತಿರುಗಿ ಆಡುತಲಿ ಸಭಿಕರ ನೋಡಿ ನಗಿಸುತಲಿ।
ಕರದ ಕಂಕಣವಲುಗುತಿರಲಾ
ಕಿರುರವವು ಕೇಳುತಿರೆ ಬಳಿಕಾ
ಶಿರದೊಳೊಲಿಯುವ ನವಿಲುಗರಿಗಳು ಒಲಿಯುತಲಿ ಬರುತಾ ೨

ಅಸುರಹರದ ಕಾಂತಿಯನು ಬೀರುವ
ಕಸುವಿನಿಂ ರಂಜಿಸುತ ನಲಿಯುತ
ಜನಕ ಕಾದಿರೆ[1] ಎನ್ನನೆನ್ನ ಕೊಡಲುಸಾತ್ತ್ವಿಕರೊಳು[1]

---

1. ಎನ್ನ ಯದುಗಿರಿನಿಂತ ವಚನಿಸುತ (ಕ).

ಮನಕೆ ಹರುಷವ ನೀಡಿ ಯತಿವರ
ತನಯನಾಸಿನುಗೆನ್ನುತಲಿ ಬಹು
ಇನಿಯ ಮಾತಿನೊಳುಸುರುತಲಿ ನಡೆತಂದ ಸಿರಿಚೆಲುವಾ ೩

ಬೆಡಗಿನಂದಡಿಯಿಡುತ ಎಡವುತ
ಹಿಡಿದು ಕರದಿಂ ಶಂಖ ಚಕ್ರಗ
ಳೊಡನೆ ಮಿರುಮಿರುಗುತಿಹ ದಿವ್ಯಾಭರಣ ಭೂಷಣದಿಂ
ಮುಡಿಯ ಮುಂಗುರುಳುಗಳ ಚಲುವಿನ
ನಡುವಿನೊಳು ಶಿಖಿಪುಚ್ಛ ಪೊಳೆಯುವ
ಜಡಿವ ಪೀತಾಂಬರದ ಕಾಂಚಿಯ ದಾಮ ಬಳುಕುತಲೀ ೪

ದಿನಕರನ ಪೋಲುತಿಹ ಫಾಲದಿ
ಮಿನುಗುತಿಹ ಕಸ್ತೂರಿತಿಲಕವು
ವನಜದಳದಂತೆಸೆವ ಲೋಚನ ಯುಗಳದಂತಗಳು
ಮನದ ಸೆಳೆಯುವ ಓರೆನೋಟದಿ
ಮನುಜರನು ತಾ ಮರುಳುಮಾಡುತ
ಘನಮಹಿಮ ಶ್ರೀರಾಮಪ್ರಿಯನು ಬಂದ ಸೊಬಗಿಂದಾ ೫

ಚರಣದಂದಿಗೆ ಗೆಜ್ಜೆಯಲುಗುತ
ಮೆರೆಯುತಲಿ ಅಡಿಯಿಡುತ ನಡೆಯುತ
ಪರಿಮಳದ ಸುಮಮಾಲೆ ಕಂಠದೊಳಲುಗುತಲಿ ನಲಿವಾ
ಕಿರುನಗೆಯ ಕೋಮಲ ಕಪೋಲದ
ಮೆರೆವ ಕರ್ಣಾಭರಣವಲುಗುತ
ಮಿರುಗುತಲಿ ಒಲಿಯುತಲಿ ಬಲುವೈಯ್ಯಾರದೊಳು ಬರುತಾ ೬

ಮೂರುವರುಷದ ಬಾಲನಂದದಿ
ತೋರುತಲಿ ಲೀಲೆಗಳ ಮುದದೊಳು
ಮೀರಿದಾನಂದವನು ಬೀರುತ ಭಾಷ್ಯಕಾರರಿಗೇ ... ...

ಓಸೆಶೋಭಿಸಿ ಮನವ ಸೆಳೆದ ಉ
ದಾರಚಲುವನು ಜಗಕೆ ಬೀರುತ
ಸುಂದರಲಾವಣ್ಯನಿಧಿ ಪುರುಷನಾದ ಗಿರಿಚಲುವಾ ೭

ತಳಿರನಣಕಿಪ ಕರಚರಣಗಳು
ಬಳುಕುತಿಹ ಬಡನಡುವಿನಂದವು
ಸುಳಿಗುರುಳು ಸಂಪಿಗೆಯ ಪೋಲುವ ನಾಸಿಕದ ಚಲುವು
ಎಳನಗೆಯು ಮಂದಂತಪಙ್ಕ್ತಿಯು
ಪೊಳೆಯುತಿರುವ ವಿಶಾಲವಕ್ಷ
ಸ್ಥಳದಿ ತಳೆದಿಹ ಲಕ್ಷ್ಮಿಯಜ್ಞದ ಸೂತ್ರ ರಾಜಿಸುತಾ ೮

ಬಂದ ಚಲುವನು ತಂದೆಯೆನ್ನುತ
ಮಂವಗಸುನದಿ ಒಲಿಯುತಲಿ ಆ
ನಂದ ನು ಬೀರುತ್ತಲಿ ಜಿಡಗನು ತೋರಿ ನಲಿಯುತಲೀ
ಮುಂದೆ ಕುಳಿತಿಹ ಭಾಷ್ಯಕಾರರ
ಮಂದಹಾಸದಿ ನೋಡಿ ನಗಿಸುತ
ಒಂದು ಕುಳಿತನು ಅಂಕದಲಿ ತಾ ಕಂದನಂದದಲೀ ೯

ಬಂದೆಯಾ ಗೋವಿಂದ ಸಿರಿವರ
ಸುಂದರನೆ ಯದುಗಿರಿಯ ನಾಯಕ
ಕಂದ ಉಭಯವಿಭೂತಿಗೈಶ್ವರ್ಯಕ್ಕೆ ನೀನಿಧಿಯೂ
ಎಂದು ಆಲಿಂಗಿಸುತ ಶಿರವನು
ಅಂದು ಕರದಿಂ ನೇವರಿಸುತಲಿ
ಬಂದು ಪರಿಕಿಸಿನಿನ್ನ ಸಲಹಿಂದುಯೆಂದತಿರಾಜ[1] ೧೦

ಬಂಧು ನೀನೆನಗೀಗ ಸಕಲಾ
ನಂದಕರ ಮುರಹರ ಸುರಾರ್ಚಿತ
ಇಂದೆನಗೆ ದರುಶನವನಿತ್ತಿಯ ಇಂದಿರಾಧವನೇ

1 ದಾ ಆಚಾರ್ಯರ್ (ಖ).

ಬಂದೆಯರಸುತ ನಿನ್ನಸಿಲ್ಲಿಗೆ
ನೊಂದೆ ಮನಮೊಳು ಒಂದನರಿಯದೆ
ಬಂದು ಸಲಹಿಸೆ ಕರುಣಸಾಗರ ಎಂದು ಸ್ತುತಿಸಿದರೂ ೧೧

ಅಂದು ಗೋಕುಲದೊಳಗೆ ನಲಿದ ಮು
ಕುಂದ ನಂದಯಶೋದೆ ಕುವರನೆ
ಇಂದು ಬಂದೈ ಭಕುತರಾಶ್ರಯ ಪರಮಪದನಾಥ
ಕಂದ ಧ್ರುವಪ್ರಹ್ಲಾದವರದನೆ
ಕಂಡನಾದೆಯ ಎನಗೊಲಿದು
ಗೋವಿಂದ ಜಯಜಯ ಎಂದು ಸ್ತುತಿಸಿದರಾಗ ಗುರುವರರೂ[1] ೧೨

ನೋಡಿದನು ಡಿಲ್ಲೀಶನೀ ಪರಿ
ರೂಢಿಗೊಡೆಯನ ಹಿರಿಯ ಮಹಿಮೆಯ
ನೋಡಿ ಸಂತಸಪಡುತಲಚ್ಚರಿಯಾಂತು ಮನಮೊಳಗೇ
ಮಾಡಿದನು ವಂದನೆಯ ಪೂಜೆಯ
ರೂಢಿಸುತ ಧನಕನಕವಸ್ತುವ
ನೀಡುತಲಿ ಯತಿರಾಜರನು ಸತ್ಕರಿಸಿದನನುನಯದೀ ೧೩

ಅಂದು ಯತಿಪರೊಡನೆ ಜನಪತಿ
ಇಂದು ನುಡಿದನು ಇನಿಯ ಮಾತಿನೊ
ಳೆಂದು ಕಾಣದ [2]ಪರಿ[2] ತೋರಿದಿರಿಂಗ ಆಚಾರ್ಯ
ಎಂದು ಸ್ತುತಿಸುತ ಶಿರವ [3]ಬಾಗಿ[3]ಸಿ
ಕಂದ ಚಲುವನಾರಾಯಣಗೆ ತಾ
ವಂದಿಸುತ ಕರಸಂಗಮ ಸಂತಸ ಮನಮುಮಾಗಿ ನೃಪತೀ ೧೪

ಮುಂದೆ ನಿಂತಿಹ ಡೆಲ್ಲಿನಾಥನ
ಮಂದಹಾಸದಿ ನೋಡಿ ಯತಿವರ
ರಂದು ನುಡಿದರು ಕಳುಹು ಎನ್ನನು ಯದುಗಿರಿಗೆ ಎನಲೂ

---

1. ಲ ಭಾಷ್ಯಕಾರರ ತಾವ್(ಖ). 2. ಮಹಿಮೆ.(ಖ). 3. ಬಗ್ಗಿ(ಕ)

ಘುಮಿಪೆ ನಿಂತಿಹ ವಂದಿಮಾಗಧ
ವೃಂದಗಳನೀಕ್ಷಿಸುತ ಭೂಪತಿ
ಎಂದನಾಜ್ಞಾವಚನದಲಿ ಜನಪದವು ಕೊಂಡಾಡೇ ೧೫

ತರಣಿತೇಜನ ಮೊನೆಯುತಿರುವೀ
ಗುರುಗಳಿಗೆ ಉಪಚರಿಸಿ[1]
ವಸ್ತ್ರಾಭರಣಗಳ ವರಮುಕ್ತ ಕಾಣಿಕೆಯನಿತ್ತು ಸತ್ಕರಿಸಿ
ವರತುರಗಗಳ ಕಾಂಪಣದಿ ಬಿಗಿ
ದಿರಿಸಿರುವ ಮಿರುಗುತಿಹ ಸಿಂ
ಗರದ ಅಂದಣವನ್ನು ತರಿಸಿದ ಚರಿಗೆಯುಹುತಲೀ ೧೬

ಚರಣಕಮಲವ ಪಿಡಿದು ಯತಿವರ
ಗೆರಗಿ ಕರಗಳ ಮುಗಿದು ವಚನಿಸ
ದಿರಲು ಭೂಪನ ನೋಡುತಲಿ ಮನ್ನಿಸುತ ಯತಿರಾಜರ್
ಭರದಿ ಸಿರಿವರ ಚಲುವರಾಯನ
ವೆರಸುತಲಿ ಅಂದಣವನೇರುತ
ತೆರಳಿದರು ಯದುಗಿರಿಗೆ ಸುರನರರೆಲ್ಲ [2]ಬೆರಗಾಗೇ ೧೭

ಸುರರು ಜಯಜಯವೆಂದು ಪೂಮಳೆ
ಕರೆಯೆ ದುಂದುಭಿವಾದ್ಯವೊಳಗಲು
ಉರುತರದ ಮಂಗಳದ ರವ ದೆಸೆಗಳಲಿ ಪಸರಿಸಲು
ಪರಮ ಮಂಗಳಮೂರ್ತಿ ಚಲುವನು
ತೆರಳುತಿಹ ವೈಭವಕೆ ಸಮನಹ
ಪರಿಯು ಧರಣಿಯೊಳಿಲ್ಲವಿದು ಭುವಿಜನಕೆ ಅಚ್ಚರಿಯೂ ೧೮

ಒಳಿಕ ಡಿಲ್ಲೀನಾಥ ನೋಡುತ
ಕಳುಹುತಿರೆ ಯತಿವರರ ಚಲುವನ
ತಿಳಿದು ಚಿನ್ನವಿಸಿದರು ಸಖಿಯರು ವರನಂದಿಗಾಕ್ಷಣದೀ

---

1. ದ (ಕ) 2. ಕೊಂಡಾಡೆ (ಖ)

ಗೆಳತಿಯರ ನುಡಿ [1]ಕೇಳುತಾಗಲೆ[1]
ಚಲುವರಾಯನ ಪೂಜಿಸುವ ವರ
ಲಲಿತಪೀಠವ ನೋಡಿ ಹಂಬಲಗೊಳುತ ಮರುಗಿದಳೂ ೧೯

ಎಲೆ ಚಲುವನಾರಾಯಣನೆ ನೀ
ಸಲೆ ಅಭಯವನು ಇತ್ತು ಎನ್ನನು
ಸಲಹುವೆನು ಎಂದೆನುತ ಪೇಳಿದ ಅಭಯವಚನವನೂ
ಸಲಿಸದಲೆ ನೀನೆಲ್ಲಿ ಪೋದೆಯ್ಯೆ
ಬಳಲುತಿರುವೆನು ನಿನ್ನ ಕಾಣದೆ
ನಳಿನಲೋಚನ ಮೊಗವ ತೋರ್ಸೈ ಎನುತ ಕೊರಲಿದಳೂ ೨೦
ತಡೆದಾಗಲೆ ಗೆಳತಿಯರು ಸವಿ
ನುಡಿಯ ಕೇಳುತ ಮನ್ನಿಸುತ್ತಲೆ
ಪಿಡಿದು ವರನಂದಿಯನು ಮನ್ನಿಸಿ ಉಪಚರಿದರು ನಯದೀ
ಬಿಡು ವ್ಯಸನವನು ಕುಸುಮಕೋಮಳೆ
ಪೊಡವಿಪಾಲಕುಮಾರನನು ನೀ
ಒಡನೆ ವರಿಸುತ ಪಡೆ ಸುಖವ ನೀನೆಂದರೊಗ್ಗಿನಲೀ ೨೧
ಹುಡುಕಿದಳು ಸಿರಿಚಲುವರಾಯನ
ಬಡುಚಲುವೆ ವರನಂದಿ ಅಳಲುತ
ಮುಡಿದ ಮಲ್ಲಿಗೆ ಉದುರುತಿರೆ ಮುಡಿ ಕೆದರಿ ಜೋಲುತಿರೇ
ಪಡಪಡನೆ ಹೊರಳುತಲಿ ನೆಲದಲಿ
ಬಿಡುತಲಂತ[2]ವು[2]ರವ ಹೊರಡುತ
ಒಡನೆ ಬರ ಗೆಳತಿಯರ ನೋಡದೆ ನಡೆದುಬರುತಿ[3]ಹಳೂ[3] ೨೨
ಈ ಪರಿಯ ಸಂತಾಪದಲಿ ಆ
ತಾಪಸೋತ್ತಮ ಹರಿಯ ಕಾಣದೆ
ತಾ ಪೊರಟು ವರನಂದಿ ಯಂತಃಪುರವ ತೊರೆಯುತಲೀ

---

1. ಮನ್ನಿಸುತಾಗಳೆ (ಖ). 2. ಪು (ಖ) 3. ದಾಪಾ (ಕ)

Funding: Tattva Heritage Foundation,Kolkata. Digitization: eGangotri.



ಶ್ರೀಪತಿಯನರಸುತಲಿ ದುಗುಡದಿ
ಕೋಪಿಸುತ ಪಿತನೆಡೆಗೆ ಸಾರುತ
ಈಪರಿಯ ಪರಿತಾಪದಲಿ ಕೇಳಿದಳು ತತ್ಪಿತನಾ ೨೩

ನೊಂದು ಮನದೊಳು ಗೆಳತಿಯರ ತಾ
ನಂದು ಮನ್ನಿಸುತಾಗ ಇಲ್ಲಿರೆ
ನೆಂದು ಹೊರಟಳು ಜವದಿ ಲೆಕ್ಕಿಸದಾಗ ಪಿತನೆಡೆಗೇ
ಬಂದ ಮಗಳನು ನೋಡಿ ಭೂಪತಿ
ಇಂದಿದೇನೆನ್ನುತ್ತ ತವಕದ
ಲಂದು ಅಚ್ಚರಿಪಡುತ ಕರೆದನು ಸುತೆಯ ಹಿತದಿಂದಾ ೨೪

ಎನಲನಲಲುಕಮನದಿ ಮಿಡುಕುತ
ಮುನಿದು ನುಡಿದಳು ಮ್ಲೇಂಛಸುತೆ ಯೌ
ವನವಿಲಾಸದ ಸಖಿಯುಗೊಲವಿನ ಪರಿಯ ವಚನಕೇ ತಾ
ಮನದಿ ವರಿಸಿದೆ ಚಲುವರಾಯನ
ಮನುಜರನು ನಾ ವರಿಸಲಾರೆನು
ಎನುತಲರುಹಿದಳಾಗ ವನಜದಳಾಕ್ಷಿ ದುಗುಡದಲೀ ೨೫

ಮಗಳೆ ಏಕಿಂತಳಲುತಿಹೆ ನೀ
ಮಿಗೆ ದುಗುಡವಿಂದೇಕೆ ಪಡುತಿಹೆ
ಬಗೆಯುವೇನೌ ಉಸುರೆನುತ ಕೇಳುತಿಹ ತತ್ಪಿತಗೇ
ಉಗುವ ನಯನಾಶ್ರುಗಳ ಒಳಲಿದ
ಮಿಗೆ ಬೆಮರುತಿಹ ತನುವ ಕಂಪದ
ಜೊಗಸೆಗಣ್ಣಿನ ಚೆಲುವೆ ನುಡಿದಳು ವಿನಯವಚನದಲೀ ೨೬

ಎಲ್ಲಿಕಳುಹಿದೆ ಎನ್ನದೇವರ
ಸೊಲ್ಲ ಲಾಲಿಸು ಜನಕನಾನವ
ನಿಲ್ಲಿಹ ಸ್ಥಳವಲ್ಲಿ ನಿಲ್ಲನು ಒಲ್ಲೆನೀ ಸ್ಥಳವಾ

ನಲ್ಲನೆನ್ನುತ ಬಗೆದೆ ಮನದಿ ಶ್ರೀ
ನಲ್ಲ ಯದುಗಿರಿನಾಥನನು ನಾ
ಇಲ್ಲಿನೆನು ಹರಿಯೊಡನೆ ಪೋಪೆನು ಕಳುಹು ನೀನೆನ್ನಾ ೨೭

ಎನುತಲಾ ವರನಂದಿಯರುಹುತ
ಮನದಿ ಹರಿಯನು ಧ್ಯಾನಿಸುತ ತಾ
ತನುವನಿಳೆಯೊಳು ಚಾಚುತಲಿ ಹಂಬಲಿಸಿ ಬಳಲುತಿರೇ
ಮನದಿ ದುಗುಡವನಾಂತು ಪಿತನಾ
ತನಯಳನು ಸಂತೈಸುತಲಿ ಬಹು
ಇನಿಯವಾತಿನೊಳರುಹಿದನು ಹಿತದಿಂದ ಸುತೆಯೊಡನೇ ೨೮

ಏಕೆ ಬಳಲುವೆ ಮಗಳೆ ನಿನಗೀ
ವ್ಯಾಕುಲವು ತಾನೇಕೆ ಕೇಳೆ
ನಾ ಕೊಡುವೆನು ನೃಪಕುವರರ ವರಿಸು ಹಿತದಿಂದಾ
ಸಾಕು ಬಿಡು ಸಂತಾಪವೇತಕೆ
ಲೋಕ ನಿನ್ನನು ಹಳಿಯುದೆ ಬರಿ
ದೇಕೆ ಅಳಲುವೆ ಮರುಳೆ ಮನುವಮಾತಾಡದಿಹೆ ಏಕೆ ೨೯

ಜನಕನಾಡಿದ ನುಡಿಯ ಕೇಳುತ
ಮನದಿ ಮಿಡುಕುತಲರುಹಿದಳು ಪಿತ
ಗನುನಯದಿ ವರನಂದಿ ಚಲುವನ ನೆನೆದು ಬಳಲುತಲೀ
ಮನುಜರನು ನಾ ವರಿಸಲಾರೆನು
ಮನದಿ ವರಿಸಿದೆ ಚಲುವರಾಯನ
ಜನಕ ಎನ್ನನು ಕಳುಹು ಪೋಗುವೆ ಹರಿಯ ಸೇರುವೆನೂ ೩೦

ನೋಡಿದನು ಡಿಲ್ಲೀಶನಚ್ಚರಿ
ಪಡುತ ವಿನಯದಿ ಸುತೆಯ ಕರೆಯುತ
ಲಾಡಿದನು ಮೃದುಮಧುರವಚನದಿ ಮಗಳ ಸಂತೈಸಿ

ಮಾಡುವೆನು ಸ್ವಯಂವರವನಿಂಗೆಲೆ
ನೋಡಿ ವರಿಸೌ ಸರಿಸು ಮೋದಗಳ
ಮಾಡಿಕೇಳ್ ಮನದಳಲ ತೊರೆಯೆಂದೆನುತ ಪೇಳುತಿರೇ ೩೧

ಕೇಳಿವಳು ವರನ ದಿ ಜನಕನು
ಪೇಳುತಿಹ ಲೋಕೋಕ್ತಿಯುಲ್ಲವ
ನಾಲಿಸುತ ಚಿನ್ನ್ಮಿಸಿದಳು ಶಶಿವದನೆ ವಿನಯದಲೀ
ನೀಲನೀರದಶ್ಯಾಮಸುಮ ಕೋ
ಮಲನ ಯದುಗಿರಿನಾಥಜಲಜವದನ
ಲೀಲೆಯಿಂದಲಿ ಒಲಿದು ವರಿಸಿವೆ ವರಿಕನಿಶ್ಚಯನೂ ೩೨

ಎನ್ನ ಮನದೊಳು ನೆಲಸಿರುವ ಸಂ
ಪನ್ನ ಮಹಿಮನ ಯದುಕುಲೇಶನ
ಮುನ್ನ ಪತಿಯೆಂದೆನುತ ವರಿಸಿದೆ ಒಲ್ಲೆನ್ಯ ನೃಪರಾ
ಎನ್ನ ಕಳುಹೈ ತಡವುಮಾಡದೆ
ನಿನ್ನ ಬೇಡುವೆನಿದನು ತಾತನೆ
ಎನ್ನ ತಡೆಯಲಿಬೇಡ ಪೋಗುವೆ ನಿಲ್ಲಲಾರೆನೊ ೩೩

ಎಂದುನುಡಿಯುತ ಶಿರವ ಬಾಗಿಸಿ
ನಿಂದಿರುವ ತನುಜೆಯನು ನೋಡುತ
ಮಂದಭಾಗ್ಯನು ನಿನ್ನ ತೊರೆವೆಂತಿರಲಿ ಎಂದೆನುತಾ
ಮುಂದೆ ನಿಂ[1]ತಿ[1]ಹ ವಂದಿಮಾಗಧ
ವೃಂದವನು ಪುರಜನರಮಾತ್ಯರ
ನಿಂದು ನೋಡುತ ಪೇಳಿದನು ನೃಪನೊಂದು ಮನದೊಳಗೇ ೩೪

ಒಳಿಕ ಕರೆಯುತ ಮಂತ್ರಿವರ್ಗವ
ಬೆಳುವಳಿಯ ವಸ್ತ್ರಾಭರಣಗಳ
ನಳವಡಿಸಿ ಅಂದಣದಲ್ಲಿ ಕುಳ್ಳಿರಿಸುತ್ತ ತನುಜೆಯನೂ

---

1. ತ (ಖ).

ಫಲಿತಾ ನಿನ್ನೀ ಮನೋರಥ
ಗಳನು ಅರಿತೆನು ನಿನ್ನ ಕಳುಹುವೆ
ಚಲುವೆ ನಿನ್ನನ್ನು ಎಂದು ನೋಡುವೆನೆನುತಲೊಂದಲಿಪನೂ ೩೫

ಧಾರಿಣೀಪತಿ ಡಿಲ್ಲಿನಾಥನು
ಮಿಂದಪತಿದುಗುಡದಲಿ ತನುಜೆಗೆ
ಚಾರುತರವಸ್ತ್ರಾಭರಣಗಳ ಕೊಡುತ ಬಳುವಳಿಯಾ
ನಾರಿಜನರನು ಕೊಟ್ಟು ಮನ್ನಿಸಿ
ಧೀರಮತಿ ವರನಂದಿಯನು ತಾ
ಘೋರವಿಪಿನದಿ ಬೀಳ್ಕೊಟ್ಟನು ಜಗವು ಬೆರಗಾಗೇ ೩೬

ಹರುಷದಿಂ ವರನಂದಿ ಪಿತನಡಿ
ಗೆರಗಿ ಭರದಿಂ ಹೊರಟು ಬಂದಳು
ಕರುಣನಿಧಿ ಶ್ರೀರಾಮಪ್ರಿಯನ್ಯನ ಅನವರ್ತಿಪುತಲಾಗಾ
ಬರುವ ಜನನಿಕರವನು ನೋಡುತ
ಬೆರಗುವಡೆದಾ ಭಾಷ್ಯಕಾರರು
ಹರುಷದಿಂ ವರನಂದಿಯನು ಮನ್ನಿಸುತ ಕೇಳಿದರೂ ೩೭

ವನಜಲೋಚನ ಚಲುವರಾಯನ
ವನಿತೆ ವರನಂದಿಯನೀಕ್ಷಿಸಿ
ಮನದಿ ಹರುಷವನಾಂತು ಭರದೊಳು ಲಕ್ಷ್ಮಣಾರ್ಯರು ತಾ
ವಿನಯದಿಂ ತಲೆವಾಗಿ ನಮಿಸುತ
ಇನಿಸು ಜೀಪರಪಡವೆ ನಡೆಯುತ
ಘನಮಹಿಮ ಯದುಶೈಲನಾಥನ ಸನಿಹಕೈತರಲೂ ೩೮

ಬರುತಿರಲು ಉರುತರದ ಸೈನ್ಯವು
ಭರದಿ ಹಿಂಬೈತರುತ ರಭಸದಿ
ಕರೆದು ಕದನಕೆ ನಿಲ್ಲೆನುತಲಾರ್ಭಟಿಸಿ ಕೂಗುತಿರೆ

ಪರಿಯ ನೋಡುತ ಲಕ್ಷ್ಮಣಾರ್ಯರು
ತಿರುಕುಲದವರಬೀದಿಗೈದುತಲ
ವರ ಬಲದ ಸಹಾಯದಿಂ ಮ್ಲೇಂಛರನು ಗೆಲ್ಲುತಲೀ ೩೯

ವರವನೀಯುತ ತಿರುಕುಲದ ವರ
ಪುರಜನರ ಹರಿಯಾಲಯಕೆ ನೀವ್
ನೆರೆವ ಬ್ರಹ್ಮೋತ್ಸವದಿ ಮೂರುದಿನಂಗಳೊಳು ಹರಿಯೂ
ಹರುಷದಿಂ ಸೇವೆಗಳ ಮಾಡುತ
ಮರಳಿ ಪ್ರತಿಸಂವತ್ಸರದೊಳುಂ
ಹರಿಯ ಸೇವೆಯ ಮಾಳ್ಪುದೆಂದಭಯವನೀಯುತಲೀ ೪೦

ಕರುಣನಿಧಿ ಶ್ರೀಚೆಲುವರಾಯನ
ಕರೆದುತಂದರು ಯದುಗಿರಿಗೆ
ವರನಂದಿಸಹಿತದಲಿ ಪರವತಿರುನಾರಣನ ಸನ್ನಿಧಿಗೇ
ಕರವ ಮುಗಿಯುತ ಭಾಷ್ಯಕಾರರು
ಶಿರವ ಹರಿಚರಣದಲಿ ಇರಿಸುತ
ಸಿರಿಯರಸ-ಶ್ರೀರಾಮಪ್ರಿಯನ ಸ್ತುತಿಸಿ ನರ್ತಿಸುತಾ ೪೧

ಬಂದ ಯತಿರಾಜರನು ನೋಡುತ
ಲಂದು ತಿರುನಾರಾಯಣನು ತಾ
ಮಂದಹಾಸದಿ ನಗುತ ಮನ್ನಿಸಿ ಮಧುರವಾಣಿಯೊಳೂ
ತಂದೆ ತಂದಿರ ಎನ್ನಪೋಲುವ
ಸುಂದರನ ಯದುಕುಲಲಲಾಮನ
ಎಂದು ಕೊಂಡಾಡಿದನು ಭುವಿಜನರೆಲ್ಲ ಬೆರಗಾಗೇ ೪೨

ಬಳಿಕ ಕುಶಲವ ಕೇಳುತಲೆ ಯದು
ಶೈಲನಾಥನು ಯತಿವರರ ಕರಕ
ಮಲವನು ಪಿಡಿದಪ್ಪಿದನು ಸಂತಸದಿ ಕರುಣಾಳೂ

ಹೋಲಿಸಲು ಸಮನಿಲ್ಲವಿಳೆಯೊಳು
ಪೇಳಲಸದಳ ನಿಮಗೆ ಯಾರೆದು
ರಿಲ್ಲ ಜಗದಾಚಾರ್ಯ ನೀವೆಂದೆನುತ ಪೊಗಳಿದನೂ ೪೩

ಅಂದು ಚಲುವನಾರಾಯಣನ ಕರ
ದಿಂದುವದನನ ರಾಮಪ್ರಿಯನ
ಒಂದುಗೂಡಿಸುತಾಗ ಸಮ್ಮೇಳನ ದರ್ಶನದಾ
ನಂದಕಡಲೊಳೋಲಾಡುತ್ತಲಿ
ವಂದಿಸುತ ಕಲ್ಪೋಕ್ತದಿಂದಲಿ
ಅಂದು ಪೂಜೆಯಗೈದನಾ ಯತಿರಾಜರೊಲವಿಂದಾ ೪೪

ಕರೆದು ವರನಂದಿಯನು ಚಲುವನು
ಇರಿಸಿದನು ತನ್ನಯ ಚರಣದೊಳು
ಧರಿಸಿದನು ವರಸಿರಿಯನುರದೊಳು ಪರಮಹರುಷದಲೀ
ಸುರರು ಜಯಜಯವೆಂದು ಪೂಮಳೆ
ಕರೆಯೆ ದುಂದುಭಿವಾದ್ಯ ಮೊಳಗಲು
ಉರುತರದ ಉಲ್ಲಾಸ ಪಡೆದುದು ಸಕಲಭಕುತಜನಾ ೪೫

ಮಾಡಿದರು ನಿತ್ಯೋತ್ಸವಂಗಳ
ಮಾಡಿದರು ಪಕ್ಷೋತ್ಸವಂಗಳ
ಮಾಡಿದರು ಮಾಸೋತ್ಸವವ ಸಂವತ್ಸರದ ಉತ್ಸವವಾ
ಕೂಡಿಸುತ ಧನಕನಕ ವಸ್ತುವ
ರೂಢಿಗೊಡೆಯನ ಯದುಗಿರೀಶನ
ಪಾಡಿಪೊಗಳಿದರಿದುವೆ ಭೂವೈಕುಂಠವೆಂದೆನುತಾ ೪೬

ಮಂಗಳಂ ಯದುಶೈಲನಾಥಗೆ
ಮಂಗಳಂ ಯತಿರಾಜತನಯಗೆ
ಮಂಗಳಂ ಶ್ರೀರಾಮಪ್ರಿಯವರನಂದಿಯುರಸನಿಗೆ

ಮಂಗಳಂ ಸ್ವರೂಪಚಲುವಗೆ
ಮಂಗಳಂ ಯದುವಂಶತಿಲಕಗೆ
ಮಂಗಳಂ ಶ್ರೀಕನಕಮಾಲಿನಿಪೂಜಿತಗೆ ಹರಿಗೇ

ಇಂತು ಸಕಲ-ದ್ರವಿಡ-ಸಂಸ್ಕೃತವೇದಪಾರಾವಾರಪಾರೀಣ-ಸ್ಮೃತೀತಿಹಾಸಾ
ಗಮಾದಿಸಕಲಶಾಸ್ತ್ರಸಂಪತ್ಸಂಯುಕ್ತ-ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾ
ಚಾರ್ಯೋಭಯವೇದಾಂತಪ್ರವರ್ತನಾಚಾರ್ಯೇತ್ಯಾದಿ-ಸಾರ್ಥಕ
ವಿಶೇಷಣವಿಶಿಷ್ಟ-ಶ್ರೀಶೇಷಾಂಶಭೂತಾಖಿಲಜಗದೇಕಾಚಾರ್ಯ
ಶ್ರೀರಾಮಾನುಜಾರ್ಯಾವತಾರಭೂತ-ಶ್ರೀಗೋಮಠಂ
ಶ್ರೀಯತೀಂದ್ರಪ್ರವಣವಂಶೋದ್ಭವ-ಶ್ರೀಮನ್ನೃಸಿಂಹಾರ್ಯ
ಪಾದಾಶ್ರಿತ-ಶ್ರೀರಾಘವಾರ್ಯ-ಚರಣಕಮಲಚಂಚರೀಕೆಯುಂ,
ಕವಿಕುಲಮನಸ್ಸರೋಜಿನೀರಾಜಹಂಸೆಯುಂ,
ಆದ,- ಶ್ರೀಃ ಶ್ರೀರಂಗನಾಯಕೀ
ವಿರಚಿತಮಪ್ಪ,-

## ಶ್ರೀ ಯದ್ವದ್ರೀಶಚರಿತಮಹಾಕಾವ್ಯದೊಳ್

ಶ್ರೀ ಭಾಷ್ಯಕಾರಕೃತಶ್ರೀರಾಮಪ್ರಿಯಾನಯನ ತದ್ವಿರಹಾಸಹಿಷ್ಣು-ತಾಲ್ಲೀಶ
ಸುತಾಕೃತ-ತದನುಸರಣ-ಶ್ರೀರಾಮಪ್ರಿಯೋತ್ಸವಮೂರ್ತಿ- ಪ್ರತಿ
ಷ್ಠಾಪನಪೂರ್ವಕ-ಶ್ರೀನಾರಾಯಣ ನಿತ್ಯೋತ್ಸವಾದಿನಿಯಮನ-
ತನ್ಮಂಗಳಾಶಾಸನಾದಿ ವಿವೇಚನಸಂಧಿಯುಂ ಸಮಾಪ್ತಂ

## ಶ್ರೀ ಯದ್ವದ್ರೀಶಚರಿತಮಹಾಕಾವ್ಯ ಸಮಾಪ್ತಂ.

ಶ್ರೀ

ಅಂದ ಚೆಂದದ                                    ಅಚ್ಚುಮೆಚ್ಚಿನ

ಮುದ್ರಣಕ್ಕೆ



# ಶ್ರೀ ವಿಜಯಲಕ್ಷ್ಮೀ ಪ್ರೆಸ್

(355/1 ಡಿ. ಸುಬ್ಬಯ್ಯ ರಸ್ತೆ, ಮೈಸೂರು.)





ಅತ್ಯುತ್ತಮ ಸುಂದರ ರೂಲಿಂಗ್, ನಂಬರಿಂಗ್

ಬೈಂಡಿಂಗ್ ವಗೈರೆಗಳಿಗೆ



# ಶ್ರೀ ಮುರಳಿ ಬೈಂಡಿಂಗ್ ವರ್ಕ್ಸ್

(355/2 ಡಿ. ಸುಬ್ಬಯ್ಯ ರಸ್ತೆ, ಮೈಸೂರು.)

